# ಕೊಡಗು  ಸಂಗಾತಿ

ಜೂನ್ 1 ರಿಂದ 30, 2003 | ಪಾಕ್ಷಿಕ ಪತ್ರಿಕೆ | ( ಜೇಶ 17-30 ಕಾರ್ತಿಕ 1-16 )

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

R.No. KA/SK/MYS-88/2003 ಸಂಪುಟ : 7 ಸಂಚಿಕೆ : 5-6 ಪುಟಗಳು : 24 ಬೆಲೆ ರೂ. : 12-00




: ಲೇಖನ ಒಳಪುಟದಲ್ಲಿ

## ಸತ್ಯ, ಧರ್ಮ, ನಿಷ್ಠೆಯ ಗುರಿ ಮುಟ್ಟುವ ಧ್ಯೇಯದ ಛಲಗಾರ ಹಾಗೂ ಸೌಜನ್ಯಮೂರ್ತಿ ದಿ|| ಲಕ್ಷ್ಮೀಗೌಡ ತಿಮ್ಮೇಗೌಡ ಕಾರ್ಲೆ (L.T. ಕಾರ್ಲೆ)

## "ಶೀಘ್ರದಲ್ಲಿ ನಿರೀಕ್ಷಿಸಿ"

ಶೀಘ್ರದಲ್ಲಿ ಕೊಡಗು ಸಂಗಾತಿ ಪತ್ರಿಕೆಯು ತನ್ನ ಕಛೇರಿ ಶಾಖೆಯನ್ನು ಮಡಿಕೇರಿಯ ಸುಭೆದಾರ್ ಅಪ್ಪಯ್ಯಗೌಡ ರಸ್ತೆಯಲ್ಲಿರುವ "ಪಾಂಡನ ಕಾಂಪೌಂಡ್ಸ್" ನಲ್ಲಿ (ಸರ್ಕಾರಿ ಜೂನಿಯರ್ ಕಾಲೇಜು ಹತ್ತಿರ) ಪ್ರಾರಂಭಿಸುತ್ತದೆ. ಸರ್ವರಿಗೂ ಅನುಕೂಲವಾಗುವ ಸೂಕ್ತ ವ್ಯವಸ್ಥೆಯನ್ನು ಸಧ್ಯದಲ್ಲೇ ಮಾಡಲಾಗುವುದು. ಹಿತೈಷಿಗಳ ಸಹಕಾರ ಈಗಿನಂತೆ ಮುಂದುವರಿಯಲಿ.

*-ವ್ಯವಸ್ಥಾಪಕರು.*

## ದೂರವಾಣಿ ಸಂಖ್ಯೆ ಬದಲಾವಣೆ:

ಕೊಡಗು ಸಂಗಾತಿ ಪತ್ರಿಕೆಯ ಮೈಸೂರಿನ ದೂರವಾಣಿ ಸಂಖ್ಯೆ 0821/ 2404290 ಆಗಿ ದಿನಾಂಕ 1-6-2003 ರಿಂದ ಬದಲಾಗಿದೆ. ಸಹಕಾರ ಎಂದಿನಂತೆ ಇರಲಿ.

*-ಸಂಪಾದಕ*

## ಅಭಿನಂದನೆಗಳು

ಕೆ.ಆರ್. ಮೋಕ್ಷಿತಾ

ಕೂಡಕಂಡಿ ರಾಮಯ್ಯ ಮತ್ತು ಶ್ರೀಮತಿ ಮುತ್ತಮ್ಮ ಇವರ ಪುತ್ರಿ ಕೆ. ಆರ್. ಮೋಕ್ಷಿತಾ ಇವಳು ಚೇರಂಬಾಣೆ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 7 ನೇ ತರಗತಿಯಲ್ಲಿ ಶೇ. 87.16 ಅಂಕಗಳಿಸಿ ಅಗ್ರ ಶ್ರೇಣಿಯಲ್ಲಿ ತೇರ್ಗಡೆಯಾಗಿರುವುದಕ್ಕೆ ಅಭಿನಂದಿಸುತ್ತಾ ಮುಂದಿನ ತರಗತಿಗಳಲ್ಲಿ ಇನ್ನಷ್ಟು ಅಗ್ರ ಶ್ರೇಣಿಗಳಿಸಲೆಂದು ಹಾರೈಸುತ್ತೇವೆ.

*ಯಿಂದ : ಕೆ. ಈ. ಬೆಳ್ಳಿಯಪ್ಪ ಕೆ. ಟಿ. ಕಾರ್ಯಪ್ಪ, ಕೆ. ಈ. ಸೋಮಣ್ಣ, ಕೆ. ಕೆ. ರಮೇಶ್, ಪಿ. ಜೆ. ಮುರಳಿ, ಕೆ. ಬಿ ಯಶೋಧ, ಕೆ. ಆರ್. ತುಳಸಿ ಮಾಲ, ಚೇರಂಬಾಣೆ ಗ್ರಾಮ, **Ph. : 235211***

## ಶುಭಾಶಯಗಳು

ಪಿ.ಯು. ಶ್ರುತಿ

ಮಡಿಕೇರಿ ತಾಲ್ಲೂಕು ಬಿಳಿಗೇರಿ ಗ್ರಾಮದ ಪೂಜಾರಿರ ಉತ್ತಪ್ಪ ಮತ್ತು ಸೀತಮ್ಮ ದಂಪತಿಗಳ ಪುತ್ರಿ ಶೃತಿ 2002-03 ಸಾಲಿನ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ 567 ಅಂಕಗಳಿಸಿ 90.72% ತೆಗೆದು ಕೊಡಗು ಜಿಲ್ಲೆಗೆ ದ್ವಿತೀಯ ರ್‍ಯಾಂಕ್‌ನಲ್ಲಿ ಪಾಸಾಗಿರುತ್ತಾಳೆ. ಇವಳು ಮಡಿಕೇರಿಯ ಸಂತ ಜೋಸೆಫ್‌ರ ಶಾಲೆಯ ವಿದ್ಯಾರ್ಥಿಯಾಗಿದ್ದಾಳೆ. ಅಲ್ಲದೆ 7 ನೇ ತರಗತಿ ಪರೀಕ್ಷೆಯಲ್ಲಿ ಈ ಹಿಂದೆ ಕೊಡಗಿನ ಗೌಡ ಜನಾಂಗದ ಮಕ್ಕಳಲ್ಲಿ ಪ್ರಥಮ ರ್‍ಯಾಂಕ್‌ನಲ್ಲಿ ಪಾಸಾಗಿದ್ದುದನ್ನು ಇಲ್ಲಿ ಸ್ಮರಿಸಬಹುದು. ಇವಳಿಗೆ ನಮ್ಮೆಲ್ಲರ ಹಾರ್ದಿಕ ಆಶೀರ್ವಾದಗಳು.

*ಪ್ರಕಟಣೆ : ತಂದೆ: ಪೂಜಾರಿರ ಪಿ. ಉತ್ತಪ್ಪ, , ತಾಯಿ: ಸೀತಮ್ಮ ಅಣ್ಣ : ರಕ್ಷಿತ್, ಬಿಳಿಗೇರಿ ಗ್ರಾಮ, **Ph. : 222789***

## ಶುಭಾಶಯಗಳು

ಕೆ. ಎಸ್. ಹರ್ಷಿತಾ

ಸುಂಟಿಕೊಪ್ಪದ ಸಂತ ಮೇರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದು ಹತ್ತನೇ ತರಗತಿ ವಾರ್ಷಿಕ ಪರೀಕ್ಷೆಯಲ್ಲಿ ಒಟ್ಟು 568 ಅಂಕ ಪಡೆದು ಶೇ. 90.88 ರ ಫಲಿತಾಂಶದೊಂದಿಗೆ ಕೊಡಗು ಜಿಲ್ಲೆಗೆ ಪ್ರಥಮವಾಗಿ ತೇರ್ಗಡೆಯಾಗಿರುವ ಕೆ. ಎಸ್. ಹರ್ಷಿತಾಳಿಗೆ ಹಾರ್ಧಿಕ ಅಭಿನಂದನೆಗಳು. ಈಕೆ ಬಿ. ಎಸ್. ಎನ್. ಎಲ್ ಉದ್ಯೋಗಿಯಾಗಿರುವ ಪುತ್ತೂರಿನ ಶ್ರೀ ಕುಮಾರ ಮಂಗಲ ಕೆ.ಪಿ. ಸಂಜೀವ ಗೌಡ ಮತ್ತು ಚಂದ್ರಾವತಿ ದಂಪತಿಗಳ ಪುತ್ರಿಯಾಗಿದ್ದು, ಅಂಗವಿಕಲ ಮಕ್ಕಳಿಗೆ (ಕಿವುಡ ಮತ್ತು ಮೂಗ) ವಾಕ್ ಶಿಕ್ಷಕಿಯಾಗುವ ಈಕೆಯ ಕನಸು ನನಸಾಗಿ ಭವಿಷ್ಯವು ಉಜ್ವಲವಾಗಿರಲೆಂದು ಹಾರೈಸುವ

*ಯಿಂದ : ಪಟ್ಟೆಮನೆ ಕೆ. ಲೋಕೇಶ್, ಪತ್ನಿ : ನಳಿನಿ, ಮತ್ತು ಮಕ್ಕಳು ಧೀರಜ್, ದೀಕ್ಷಿತ, ಗದ್ದೆಹಳ್ಳ, ಸುಂಟಿಕೊಪ್ಪ, ಕೊಡಗು. **Ph. : 08276 / 662722***

## ಶುಭಾಶಯಗಳು

ಪೂಜಾರಿರ ಶೃತಿ ಉತ್ತಪ್ಪ

ಮಡಿಕೇರಿ ತಾಲ್ಲೂಕು ಬಿಳಿಗೇರಿ ಗ್ರಾಮದ ಪೂಜಾರಿರ ಉತ್ತಪ್ಪ ಮತ್ತು ಸೀತಮ್ಮ ದಂಪತಿಗಳ ಮಗಳು ಶೃತಿಯು 2002-03 ರಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಕೊಡಗು ಜಿಲ್ಲೆಗೆ ದ್ವಿತೀಯ ಸ್ಥಾನ ಗಳಿಸಿ ಹೆತ್ತವರಿಗೂ, ಹುಟ್ಟಿದ ಮನೆಗೂ, ನಾಡಿಗೂ ಕೀರ್ತಿ ತಂದಿರುವ ನಿನ್ನ ಭವಿಷ್ಯವು ಸದಾ ಶ್ರೇಷ್ಠವಾಗಿರಲೆಂದು ಹಾರೈಸುವೆವು.

*ನಿನ್ನ ಅತ್ತೆಮ್ಮಂದಿರಾದ*
*ಕರ್ಣೇಯ್ಯನ ಮಣಶೀಲಾ ಸೋಮಣ್ಣ,*
*ಮಗ - ಜೀತು ಮತ್ತು ಕರ್ಣೇಯ್ಯನ ಸೋಮಣ್ಣ,*
*ಮಡಿಕೇರಿ **Ph. : 225101***

ಮತ್ತು

*ಕೋಳುಮಾಡನ ಇಂದಿರಾ ವಿನಯ್ಯಾ,*
*ಮಕ್ಕಳು - ನಯನ, ನವೀನಾ ಮತ್ತು*
*ಕೋಳುಮಾಡನ ವಿನಯ್ಯಾ, ಮಡಿಕೇರಿ*
***Ph. : 224856***



# 2003, ಜೂನ್ 1 ರಿಂದ 30ರ ತನಕ

**ಒಳನೋಟ**



| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | **ಕೊಡಗು ಸಂಗಾತಿ**, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. **ಫೋನ್:0821/2404290**<br>ಕಾವೇರಿ ಆಟೋಮೊಬೈಲ್, ರಿಂಗ್ ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **ಫೋನ್:2416790** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ ಪುಸ್ತಕ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಇತ್ಯಾದಿಗಳು | **ಕೊಡಗು ಸಂಗಾತಿ** C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201 **ಫೋನ್ : 228380, 228047** |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
| ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು -560 006 Mobile : 94482-25160 |

ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 12ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಮಡಿಕೇರಿ ನಗರದ ಕುಡಿಯುವ ನೀರಿನ ಪ್ರಶ್ನೆ

ಮಡಿಕೇರಿ ನಗರವು ದಿನಕಳೆದಂತೆ ವಿಸ್ತಾರವಾಗಿ ಬೆಳೆದು, ದಿನದಿಂದ ದಿನಕ್ಕೆ ಜನಸಂಖ್ಯೆ ಹೆಚ್ಚಾಗುತ್ತಿದ್ದಂತೆ ನೀರಿನ ಬವಣೆ ಈ ಹಿಂದೆಂದಿಗಿಂತಲೂ ಈಗ ಎರಡರಷ್ಟಾಗಿರುವುದು ಕಡು ಸತ್ಯ. ಜನ ಬವಣೆ ಪಡುತ್ತಿರುವುದನ್ನು ಪ್ರತ್ಯಕ್ಷ ಕಂಡಾಗ ಮಾತ್ರ ಅದರ ಕಷ್ಟ ಅರಿವಾಗುತ್ತದೆ.

ನೀರಿನ ಸರಬರಾಜು ಕೂಟು ಹೊಳೆಯ ದಾಸ್ತಾನು ಬಿಟ್ಟರೆ ಬೇರೆ ಯಾವುದೇ ಆಶ್ರಯ ಮಡಿಕೇರಿಗೆ ನೀರನ ಸರಬರಾಡಿಗೆ ವ್ಯವಸ್ಥೆ ಇರುವುದಿಲ್ಲ. ಇದಕ್ಕಾಗಿ ಮಡಿಕೇರಿಯ ಪುರಸಭೆಯಾಗಲಿ ಅಥವಾ ಮಡಿಕೇರಿ ನಗರಾಭಿವೃದ್ಧಿ ಅಧಿಕಾರಿಗಳು ಗಮನ ಹರಿಸಿದ್ದಾರೋ ಗೊತ್ತಿಲ್ಲ, ಗಮನ ಹರಿಸಿದರೂ ನಿಧಾನ ಗತಿಯಲ್ಲಿರುವುದು ಬೇಸರದ ಸಂಗತಿ.

ಕೂಟು ಹೊಳೆಯ ಅಣೆಕಟ್ಟಿನ ಹಿನ್ನೀರಿನ ನೆಲವನ್ನು 10 ರಿಂದ 15 ಅಡಿಗಳ ಆಳದಷ್ಟು ಆಳಮಾಡಿದರೆ ಖಂಡಿತವಾಗಿಯೂ ಈಗಿರುವ ನೀರಿನ ಸಮಸ್ಯೆಯನ್ನು ಬಗೆಹರಿಸಬಹುದು. ಈಗ ಯಾವ ರೀತಿಯಲ್ಲಿ ಕೂಟು ಪೊಳೆಯಿಂದ ನೀರು ಮಡಿಕೇರಿ ನಗರಕ್ಕೆ ಬರುತ್ತಿದ್ದಂತಯೆ ಸಾಕು. ಅಂತೆಯೇ ಮಡಿಕೇರಿ ನಗರದ ವ್ಯಾಪ್ತಿಯಲ್ಲಿ 15 ರಿಂದ 20ರಷ್ಟು ಕೆರೆಗಳನ್ನು ತೋಡಿ ನೀರನ್ನು ದಾಸ್ತಾನು ಮಾಡಿದರೆ ಖಂಡಿತವಾಗಿಯೂ ನೀರಿಗಾಗಿ ಬವಣೆ ಪಡಬೇಕಾಗಿಲ್ಲ.

ಮಡಿಕೇರಿ ನಗರದಲ್ಲಿ ಮೂಲೆ ಮೂಲೆಗಳಲ್ಲಿ ತಗ್ಗು ತಗ್ಗಾದ ಜಾಗವು ಸಾಕಷ್ಟಿದೆ. ಉದಾಹರಣೆಗೆ ಪೊಲೀಸ್ ಕ್ವಾಟರ್ಸ್ ಹತ್ತಿರ, ಗೌಡ ಸಮಾಜದ ಸ್ಮಶಾನದ ಹತ್ತಿರ, ರಾಜಸೀಟಿನ ಹತ್ತಿರ ಹೊಟೇಲ್ ರಾಜದರ್ಶನದ ಕೆಳಭಾಗ, ಸುದರ್ಶನ್ ಅತಿಥಿ ಗೃಹದ ಕೆಳಭಾಗ ಜಲಾಶಯ ಬಡಾವಣೆ, ಮ್ಯಾನ್ಸ್ ಕಾಂಪೌಂಡ್‌ನ ಬಲಭಾಗ ಮತ್ತು ಎಡಭಾಗದ ಗದ್ದೆಗಳಲ್ಲಿ, ಗೌಡ ಸಮಾಜದ ಮೇಲ್ಭಾಗವಿರುವ ಪಂಪ್‌ಕೆರೆ, ಕನ್ನಂಡ ಬಾಣೆಯ ಗದ್ದೆಗಳಲ್ಲಿ, ಮುತ್ತಪ್ಪ ದೇವಸ್ಥಾನದ ಹತ್ತಿರವಿರುವ ಪಂಪ್‌ಕೆರೆ, ಮಾರ್ಕೆಟ್ ಹಿಂಭಾಗದ ಹಳ್ಳದಲ್ಲಿ,ಕಾನ್ವೆಂಟ್ ಜಂಕ್ಷನ್ ಹತ್ತಿರ ಗದ್ದೆಯಲ್ಲಿ ಹಾಗೂ ಕಾಲೇಜು ಹತ್ತಿರದ ಯಾಲದಾಳು ಜಮೀನು ಇತ್ಯಾದಿ ಸ್ಥಳಗಳಲ್ಲಿ ಕೆರೆಗಳ ಅಥವಾ ದೊಡ್ಡದಾದ ಬಾವಿಗಳನ್ನು ತೋಡಿ ನೀರನ್ನು ದಾಸ್ತಾನು ಮಾಡಬಹುದು. ಈ ಸ್ಥಳಗಳಲ್ಲಿ ಬೇಕಾಗುವಷ್ಟು ಜಾಗವನ್ನು ಪುರಸಭೆಯವರು ನಿಗದಿತ ಬೆಲೆಯಲ್ಲಿ ಕೊಳ್ಳಬೇಕು. ಸರಕಾರದ ಕೆಲಸಕ್ಕೆ ಪ್ರಥಮ ಆದ್ಯತೆ ಇರಬೇಕು. ಖಾಸಗಿಯವರ ಆದ್ಯತೆ ದ್ವಿತೀಯ ಶ್ರೇಣಿ ಯದು. ಇಂತಹ ಸ್ಥಳಗಳಲ್ಲಿ ಕೆರೆಗಳಃಹಳ್ಳಗಳ ನಿರ್ಮಾಣವಾದರೆ ಮಳೆಗಾಲದಲ್ಲಿ ನೀರನ್ನು ಶೇಖರಿಸಿ ಡುವುದಲ್ಲದೆ, ಬೇಕಾದಾಗ ಕೂಟುಪೊಳೆಯಿಂದ ನೀರನ್ನು ರವಾನಿಸಬಹುದು. ಪ್ರತಿಯೊಂದು ಕೆರೆಗಳು ಕೂಟುಪೊಳೆ ಯಿಂದ ಬರುವ ಮುಖ್ಯ ಪೈಪ್‌ಗೆ ಸಂಪರ್ಕವಿರಬೇಕು.

ಈ ಹಿಂದೆ ಪತ್ರಿಕೆಯಲ್ಲಿ ಓದಿದಂತೆ ಬೇತು ನದಿಯಿಂದ ನೀರು ಮಡಿಕೇರಿ ನಗರಕ್ಕೆ ತರುವುದು ಭಗೀರಥ ಪ್ರಯತ್ನವೂ ಹೌದು ಮತ್ತು ಕೋಟ್ಯಾಂತರ ರೂಪಾಯಿ ವೆಚ್ಚ ಮಾಡಬೇಕಾಗುತ್ತದೆ. ಅಲ್ಲದೆ ಆ ನಿಟ್ಟಿನಲ್ಲಿ ಖರ್ಚು ಮಾಡುವ ಹಣವೂ ನಿಜವಾಗಿಯೂ ಈ ಯೋಜನೆಗೆ ಸಹಕಾರಿಯಾಗುವ ನಂಬಿಗೆಯೂ ಕೂಡ ಕಮ್ಮಿಯೆನ್ನಲಡ್ಡಿಯಿಲ್ಲ. ಈ ದೃಷ್ಟಿಯಲ್ಲಿ ಸರಕಾರಕ್ಕೆ ಸಾಕಷ್ಟು ಲಾಭವಾಗುವ ಸಂಭವವೇ ಹೆಚ್ಚು. ಹಟ್ಟಿ ಹೊಳೆಯಿಂದ ನೀರನ್ನು ತರಿಸುವುದು ಬೇತ್ರಿಯಿಂದ ನೀರನ್ನು ತರಿಸುವುದು ಇವೆಲ್ಲ ನಿರರ್ಥಕವೇ ಸರಿ. ಈಗಿರುವ ಕೂಟುಪೊಳೆಯನ್ನು ಬೇಸಿಗೆಯಲ್ಲಿ ಸಾಕಷ್ಟು ಆಳವಾಗಿಯೂ ಅಗಲವಾಗಿಯೂ ಹೆಚ್ಚಿನ ಖರ್ಚಿಲ್ಲದೆ ಮಾಡಿದಲ್ಲಿ ಸರಕಾರಕ್ಕೆ ಖಂಡಿತ ಹೆಚ್ಚಿನ ಫಾಯಿದೆ ಇರುವುದು.

ಈ ಮೇಲಿನ ಎಲ್ಲಾ ಅಭಿಪ್ರಾಯವನ್ನು ಸಂಗ್ರಹಿಸಿ, ಸೂಕ್ತ ತಜ್ಞರನ್ನು ಸೇರಿಸಿ, ಸಾರ್ವಜನಿಕರಿಂದ ಉತ್ತಮ ಅಭಿಪ್ರಾಯ, ಸಲಹೆ ಆಹ್ವಾನಿಸಿ, ಸಾಗಿದರೆ ಮಡಿಕೇರಿ ನಗರಕ್ಕೆ ಯಾವುದೇ ನೀರಿನ ಬವಣೆ ಯಾವುದೇ ಕಾಲಕ್ಕೂ ಉದ್ಭವಿಸಲಾರದೆಂದು ಸಂಗಾತಿಯ ವಿಶ್ವಾಸವಾಗಿದೆ.

ಮಡಿಕೇರಿ ನಗರದ ಜನಸಂಖ್ಯೆ ಕೇವಲ ಮೂವತ್ತು ಸಾವಿರ ಮಾತ್ರವಾಗಿರುವುದರಿಂದ ಈ ಮೇಲಿನ ಸತ್ಯಾಂಶಗಳನ್ನು ಪುರಸಭೆ ಮತ್ತು ಅಧಿಕಾರಿಗಳು ಗಮನಿಸಿದರೆ ನೀರಿನ ಭವಣೆ ನೀಗಿಸಲು ಸಾಧ್ಯವಾದೀತು. ಮರಳಿ ಯತ್ನವ ಮಾಡು, ಕಾದು ನೋಡೋಣಾ.

# ನಾ ಕಂಡಂತೆ ಶ್ರೀ ಎಲ್. ಟಿ. ಕಾರ್ಲೆ

ಬೆಂಗಳೂರಿನಲ್ಲಿರುವ ಎಲ್.ಟಿ. ಕಾರ್ಲೆ ಗ್ರೂಫ್ ಆಫ್ ಕಂಪನಿ ಒಂದು ಬೃಹತ್ ಸಂಸ್ಥೆ. ಸಾವಿರಾರು ಜನರಿಗೆ ಉದ್ಯೋಗಾವಕಾಶ ಕಲ್ಪಿಸಿ ಕೊಟ್ಟಿರುವ ಕಾರ್ಲೆ ಸಂಸ್ಥೆಯ ಸಂಸ್ಥಾಪಕರು ದಿ|| ಲಕ್ಷ್ಮೀಗೌಡ ತಿಮ್ಮೇಗೌಡ ಕಾರ್ಲೆ ಇವರು. ಹಾಸನ ಜಿಲ್ಲೆಯ ನಮ್ಮ ಜನಾಂಗದ ಗೌಡರು, ಇವರು 14-12-1919 ರಲ್ಲಿ ಜನಿಸಿದರು. 1998 ರಲ್ಲಿ ಇವರ ಮರಣದ ನಂತರ ಇವರ ಪುತ್ರರಾದ ಶ್ರೀ ಸುದರ್ಶನ್ ಹಾಗೂ ಮಹೇಂದ್ರ ಕಾರ್ಲೆಯವರು ಈ ಸಂಸ್ಥೆಯ ಏಳಿಗೆಗೋಸ್ಕರ ಬಹಳ ಶ್ರಮ ಪಟ್ಟು ಬೆಳೆಸಿ ಉಸ್ತುವಾರಿಯನ್ನು ಮುಂದುವರಿಸಿದ್ದಾರೆ. ದಿ|| ಕಾರ್ಲೆಯವರ ಹಿರಿಯ ಪುತ್ರ ಕೆ. ಟಿ. ಶಿವಪ್ರಸಾದ್ ರಾಜ್ಯಪ್ರಶಸ್ತಿ ವಿಜೇತ ಚಿತ್ರಕಲಾ ವಿನ್ಯಾಸಕರು ಹಾಗೂ ಒಬ್ಬಳೇ ಮಗಳಾದ ಡಾ. ವಿಜಯ ಲಕ್ಷ್ಮಿ ಮುಂಡೋಡಿ ಅವರ ಪತಿ ಡಾ. ಬಾಲಕೃಷ್ಣ ಮುಂಡೋಡಿಯವರೊಂದಿಗೆ ತಮ್ಮದೇ ಆದ ನರ್ಸಿಂಗ್ ಹೋಂನಲ್ಲಿ ಜವಾಬ್ದಾರಿಕೆಯನ್ನು ಹೊತ್ತು ಅಮೇರಿಕಾ ದಲ್ಲೇ ನೆಲೆಸಿದ್ದಾರೆ. ಇವರ ಒಬ್ಬಳೇ ಮಗಳು ಅಮೇರಿಕಾದ ಅಧ್ಯಕ್ಷ ಜಾರ್ಜ್ ಡಬ್ಲ್ಯು ಬುಷ್‌ರವರಿಂದ ಪ್ರಶಸ್ತಿ ಪಡೆದಿರು ವುದು ನಿಜಕ್ಕೂ ಹೆಮ್ಮೆಯ ವಿಷಯವಾಗಿದೆ.

ಎಲ್.ಟಿ. ಕಾರ್ಲೆಯವರ ಧರ್ಮಪತ್ನಿ ಶ್ರೀಮತಿ ಸರೋಜಿನಿ ಕಾರ್ಲೆಯವರು ಭಾಗಮಂಡಲ ಚೆಟ್ಟಿಮಾನಿ ಗ್ರಾಮದ ಕೆದಂಬಾಡಿ ಸೋಮಪ್ಪನವರ ಮಗಳು ಹಾಗೂ ಸಂಪಾಜೆ ಸಣ್ಣಯ್ಯ ಪಟೇಲರ ಮೊಮ್ಮಗಳು. ಅಂದರೆ ಎನ್. ಎಸ್. ದೇವಿ ಪ್ರಸಾದ್‌ರವರ ಅಕ್ಕನ ಮಗಳು.

ದಿ. ಎಲ್. ಟಿ.ಕಾರ್ಲೆಯವರ ಸಂಸ್ಥೆಯ ಮುಖ್ಯ ಕಛೇರಿಯಲ್ಲಿ ಅವರ ಪ್ರತಿಮೆ ಅನಾವರಣ ಕಾರ್ಯಕ್ರಮದಲ್ಲಿ ನಾನು ನಡೆದು ಬಂದ ಮೂರು ದಶಕದ ಹಾದಿಯ ಕೆಲವು ನೆನಪು ಮರುಕಳಿಸಿತು. ಇದರಲ್ಲಿ ಕೆಲವನ್ನು ತಿಳಿಸಲು ಇಚ್ಛಿಸುತ್ತೇನೆ. ಶ್ರೀಯುತ ಕಾರ್ಲೆಯವರು 1968 ರಲ್ಲಿ ಅಮೇರಿಕಾದಿಂದ ವ್ಯವಸಾಯದ ಬಗ್ಗೆ ಹೆಚ್ಚಿನ ತರಬೇತಿಯನ್ನು ಪಡೆದು ಹೊಸತಳಿಗಳ ಬಗ್ಗೆ ಹಾಸನದ ಅವರ ಫಾರಂನಲ್ಲಿ ಪ್ರಯೋಗಾತ್ಮಕ ರೀತಿಯಲ್ಲಿ ನಡೆಸಿ ಉತ್ತಮ ತಳಿಗಳ ಬಗ್ಗೆ ರೈತರಿಗೆ ತಿಳಿಸಿ ಕೃಷಿ ಅಭಿವೃದ್ಧಿ ಪಡಿಸಿದ್ದರು. ಇವರು ವ್ಯವಸಾಯ ಕ್ಷೇತ್ರದಲ್ಲಿ ಮತ್ತು ಕೈಗಾರಿಕೋದ್ಯಮದಲ್ಲಿ ತನ್ನ ಜೀವನವನ್ನು ಬಹಳವಾಗಿ ಅಳವಡಿಸಿಕೊಂಡಿದ್ದರು. ಕೃಷಿ ಭೂಮಿಯನ್ನು ನೋಡಿ ತುಂಬಾ ಆನಂದ ಪಡುತ್ತಿದ್ದರು. ಇವರ ಕರ್ನಾಟಕ ಕೃಷಿಕ ಸಮಾಜದ ಅಧ್ಯಕ್ಷರಾಗಿ ಮತ್ತು ಕೆಪಿಸಿಸಿಯ ಉಪಾಧ್ಯಕ್ಷ ರಾಗಿಯೂ ದಕ್ಷಿಣ ಭಾರತದ ಜವಳಿ ಉದ್ಯಮ ಸಂಸ್ಥೆಯ ಅಧ್ಯಕ್ಷರಾಗಿಯೂ ಕೇಂದ್ರದಲ್ಲಿ ಕಾಂಗ್ರೆಸ್ ಸರ್ಕಾರವಿದ್ದಾಗ ಆರ್ಥಿಕ ಸಲಹೆಗಾರರಾಗಿಯೂ ಲೆದರ್ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್‌ನಲ್ಲಿ ಡೈರೆಕ್ಟರಾಗಿಯೂ ಇನ್ನಿತರ ಹಲವಾರು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಮೊದಲು ಅವರ ಫಾರಂನಲ್ಲಿ ಕೆಲಸ ಮಾಡುತ್ತಿದ್ದಾಗ ಮಾಡಿದ ತಪ್ಪು ಕಂಡು ನನಗೆ ಒಂದೆರಡು ಸಲ ಬೈದಿದ್ದರು. ಕೂಡಲೇ ನಾನು ಕೆಲಸ ಮುಂದುವರೆಸುವುದಿಲ್ಲ ಎಂದು ಹೇಳಿ ಊರಿಗೆ ಹೊರಡಲು ಸಿದ್ಧನಾದೆ. ನನ್ನನ್ನು ಮರುದಿವಸ ಅವರ ಬಳಿ ಕರೆಯಿಸಿ ಕೊಂಡು "ನೋಡು ಯಾರಿಗೆ ತನ್ನ ತಪ್ಪನ್ನು ಒಪ್ಪಿ ಕೊಳ್ಳುವ ಘನತೆ ಇರುವುದೋ ಅವನೇ ದೊಡ್ಡ ವ್ಯಕ್ತಿ" ಎಂದು ಹೇಳಿ ನನ್ನನ್ನು ಸಂತೈಸಿದಾಗ ನನಗೆ ಅವರು ಹೇಳಿದ ಮಾತುಗಳಿಂದ ಜ್ಞಾನೋದಯವಾಯಿತು." ನಂತರ ಅವರೇ ಸ್ಥಾಪಿಸಿದ ಬೆಂಗಳೂರು ಕ್ರೋಮ್ ಟ್ಯಾನರಿ ಎಂಬ ಲೆದರ್ ಫ್ಯಾಕ್ಟರಿಯಲ್ಲಿ 1972 ರಲ್ಲಿ ಕೆಲಸ ಮಾಡುತ್ತಿದ್ದಾಗ ನನಗೆ I.T.I. ನಲ್ಲಿ ಕೆಲಸಕ್ಕೆ ಕರೆ ಬಂದಿತ್ತು. ಕೆಲಸಕ್ಕೆ ಸೇರಿ ಒಂದು ವಾರದಲ್ಲಿ ಇದನ್ನು ತಿಳಿದ ಶ್ರೀಯುತ ಕಾರ್ಲೆಯವರು ಪುನಃ ನನ್ನನ್ನು ಬಳಿ ಕರೆದು *"ನೋಡು ನೀನು I.T.I.ಯಲ್ಲಿ ಸಾವಿರಾರು ಜನ ಕೆಲಸಗಾರರಲ್ಲಿ ನಿನೊಬ್ಬ ಸಾಮಾನ್ಯ ಉದ್ಯೋಗಿ, ಸಾಮಾನ್ಯ ಮನುಷ್ಯನಾಗಿ ಇರುತ್ತೀಯೆ ಹೊರತು ಯಾರು ನಿನ್ನನ್ನು ಗುರುತಿಸಲಾರರು.* ಜೀವನ ಅಷ್ಟಕ್ಕೆ ಸೀಮಿತವಾಗಬಾರದು, ನಮ್ಮ ಕೈಕೆಳಗೆ ನೂರಾರು ಜನ ಕೆಲಸ ಮಾಡಿದಾಗ ಮಾತ್ರ ಘನತೆ ಗೌರವದಿಂದ ಜನ ನಮ್ಮನ್ನು ಗುರುತಿಸುತ್ತಾರೆ ಎಂದು ಹೇಳಿ ನನ್ನ ಮುಂದಿನ ಭವಿಷ್ಯದ ಬಗ್ಗೆ ಹಾಗೂ ಏಳಿಗೆಯ ಬಗ್ಗೆ ನುಡಿದಿದ್ದರು. ಅವರ ಈ ಅಮೃತವಾಣಿಯಲ್ಲಿ ನನ್ನ ಜೀವನವನ್ನು ಮಾರ್ಪಾಡು ಮಾಡಲು ಸಹಕಾರವಾಯಿತು. ಅವರ ಜೊತೆಯಲ್ಲಿ ಬಹಳಷ್ಟು ಕಾಲ ಕೆಲಸ ಕಾರ್ಯದಲ್ಲಿ ನಿರತನಾಗಿದ್ದೆ. ಅವರನ್ನು ನಾನು ಬಹಳ ಹತ್ತಿರದಿಂದ ಬಲ್ಲವನಾಗಿದ್ದೆ ಮತ್ತು ಅವರು ನನ್ನನ್ನು ಸ್ವಂತ ಮಗನಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಶ್ರೀಯುತರು ಯಾವುದೇ ಕಾರ್ಯದಲ್ಲಿ ವ್ಯವಹಾರಗಳ ಬಗ್ಗೆ ಬಹಳ ಶಿಸ್ತು, ಲೆಕ್ಕಾಚಾರ ಮತ್ತು ಕಟ್ಟುನಿಟ್ಟಾಗಿದ್ದರು. ಆದರೆ ಇವರು ಹೃದಯಾಳದಲ್ಲಿ ಬಹಳ ಮೃದು ಹಾಗೂ ಅನುಕಂಪ ವ್ಯಕ್ತಿಯಾಗಿದ್ದರು.

ಇದಕ್ಕೆ ಸಂಬಂಧಿಸಿದಂತೆ ನನಗೆ ಒಂದು ಘಟನೆ ನೆನಪಿಗೆ ಬರುತ್ತದೆ. ಒಂದು ಸಲ ನಾನು ಬೆಂಗಳೂರು ಕ್ರೋಮ್ ಟ್ಯಾನರಿ ಕಾಡುಗೊಂಡನಹಳ್ಳಿ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿದ್ದಾಗ ಕೆಲವು ಮಷಿನ್ ಗಳನ್ನು ಜರ್ಮನಿಯಿಂದ ಆಮದು ಮಾಡಿದ್ದರು. ಅದನ್ನು ಮದ್ರಾಸ್ ಬಂದರಿಂದ ರೀಲಿಸ್ ಮಾಡಿ ಲಾರಿಯಲ್ಲಿ ತರುವಾಗ ಮಡಿವಾಳ ಚೆಕ್ ಪೋಸ್ಟ್‌ನಲ್ಲಿ ವಿನಾ ಕಾರಣ ವಾಣಿಜ್ಯ ತೆರಿಗೆ ಅಧಿಕಾರಿಗಳು ಅದನ್ನು ತಡೆ ಹಿಡಿದು, ಹಣ ಕೊಟ್ಟರೆ ಮಾತ್ರ ಬಿಡುವುದಾಗಿ ಲಾರಿಯನ್ನು ನಿಲ್ಲಿಸಲಾಯಿತು. ಇದನ್ನು ಕಾರ್ಲೆಯವರಿಗೆ ತಿಳಿಸಲಾಗಿ ಆ ಕೂಡಲೇ ನಾನು ಮತ್ತು ಕಾರ್ಲೆಯವರು ಚೆಕ್ ಪೋಸ್ಟ್‌ಗೆ ಹೋಗಿ ಅವರು ಉನ್ನತ ಅಧಿಕಾರಿಯನ್ನು ಸಂಪರ್ಕಿಸಿ ಲಾರಿಯನ್ನು ರೀಲಿಸ್ ಮಾಡಿಸಿದರು. ಹಾಗೂ ಆ ಅಧಿಕಾರಿಗಳನ್ನು ಸಂಪರ್ಕಿಸಿ ಲಾರಿಯನ್ನು ರೀಲಿಸ್ ಮಾಡಿಸಿದರು. ಹಾಗೂ ಆ ಅಧಿಕಾರಿ 10-15 ದಿವಸಗಳಿಂದ ಕಾರ್ಲೆಯವರನ್ನು ಅಂಗಲಾಚಿ, ಮಾಡಿದ ತಪ್ಪಿಗಾಗಿ ಕ್ಷಮೆಯನ್ನು ಕೋರಿ ತನ್ನ ಸಂಸಾರ ಬೀದಿ ಪಾಲು ಆಗುವುದಾಗಿ ಮರುಗಿದನು. ಅವನ ಈ ಮರುಕವನ್ನು ತಿಳಿದ ಕಾರ್ಲೆಯವರು ಪುನಃ ಕೆಲಸ ಸಿಗುವಂತೆ ಮಾಡಿ ತನ್ನ ಹೃದಯವಂತಿಕೆಯನ್ನು ತೋರಿಸಿದರು.

ಇವರು ಭ್ರಷ್ಟಾಚಾರವನ್ನು ಜೀವನ ಪರ್ಯಂತ ವಿರೋಧಿಸು ತ್ತಿದ್ದರು. ನ್ಯಾಯ, ನೀತಿ, ಧರ್ಮದ ದಾರಿಯಲ್ಲೇ ನಡೆಯು ತ್ತಿದ್ದರು. ಇವರೊಡನೆ ನಾನು ಬಹಳಷ್ಟು ರಾಜಕೀಯ

B ಕ್ಕಿ ಬೇಡುವುದು ಒಳ್ಳೆಯದಲ್ಲ

ಮುಖಂಡರನ್ನು ಭೇಟಿ ಮಾಡಿದ ಅನುಭವ ನನ್ನದಾಗಿದೆ. ಇವರು ಬಹಳಷ್ಟು ಧೈರ್ಯಶಾಲಿ ಮತ್ತು ದೃಢ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದರು. ಅವರ ಯಶಸ್ಸಿನ ಹಿನ್ನಲೆಯಲ್ಲಿ ಅವರ ಶ್ರೀಮತಿಯವರ ಸಹಕಾರವು ಬಹು ಮುಖ್ಯ ಪಾತ್ರವೆನಿಸಿದೆ. ತಮ್ಮ ದೈನಂದಿನ ಜೀವನದಲ್ಲಿ ಯೋಗ ಮತ್ತು ಆಹಾರದ ವಿಷಯದಲ್ಲಿ ತುಂಬು ಕಟ್ಟುನಿಟ್ಟಾಗಿದ್ದರು ಮತ್ತು ಅದರ ಪ್ರಾಮುಖ್ಯತೆಯನ್ನು ಇನ್ನೊಬ್ಬರಿಗೆ ಹೇಳುತ್ತಿದ್ದರು. ಅವರ ಮನ ಸ್ಥೈರ್ಯವೇ ಅವರಿಗೆ ಬಂಡವಾಳವಾಗಿತ್ತು. ಹತ್ತಾರು ಫ್ಯಾಕ್ಟರಿಗಳನ್ನು ಆರಂಭಿಸಿ ದೇಶದ ಪ್ರಗತಿಗೆ ಹಾಗೂ ಸಾವಿರಾರು ಕುಟುಂಬಗಳಿಗೆ ಅನ್ನದಾತರಾಗಿದ್ದು ಇಂದು ಅವರ ಸಂಸ್ಥೆ ಸಾಕ್ಷಿಯಾಗಿ ನಿಂತಿದೆ. ಅವರು ಇಂದು ನಮ್ಮ ಕಣ್ಣ ಮುಂದೆ ಇಲ್ಲವಾದರೂ ಅವರು ಹಾಕಿ ಕೊಟ್ಟಂತಹ ಸತ್ಯ, ಧರ್ಮ, ಶಿಸ್ತು, ಕರ್ತವ್ಯ ನಿಷ್ಠೆಯ ಮಾರ್ಗ ಇನ್ನು ಜೀವಂತವಾಗಿ ಎಲ್ಲಾರಿಗೂ ದಾರಿದೀಪವಾಗಿದೆ.

ಈ ಮಹಾನುಭಾವರ ಚಿತಾಭಸ್ಮವನ್ನು ಸ್ವತಃ ಕಾಶಿಗೆ ಹೋಗಿ ಗಂಗಾರ್ಚನೆ ಮಾಡಿದ ಪುಣ್ಯ ಕೀರ್ತಿ ನನ್ನದಾಗಿದೆ. ಅದಕ್ಕೆ ಅವಕಾಶ ಮಾಡಿ ಕೊಟ್ಟ ಅವರ ಧರ್ಮ ಪತ್ನಿ ಹಾಗೂ ಅವರ ಮಕ್ಕಳಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು. *ಗುರಿ ಮುಟ್ಟುವ ಧ್ಯೇಯ ಹಾಗೂ ಛಲವಿದ್ದ* ರೆಯಾವ ಕಾರ್ಯದಲ್ಲಾದರೂ ಜಯ ಖಂಡಿತ ಎಂಬ ಪಾಠವನ್ನು ನಾವು ದಿ|| ಕಾರ್ಲೆಯವರ ಜೀವನ ವೈಖರಿಯಿಂದ ಅರಿತುಕೊಳ್ಳಬಹುದಾಗಿದೆ.

*ಕರ್ಮಣ್ಯೇ ವಾದಿಕಾರಸ್ತೆ ಮಾಫಲೇಶು ಕದಾಚಿನಃ*
*ಭಗವಂತ ದಿ|| ಕಾರ್ಲೆಯವರ ಆತ್ಮಕ್ಕೆ ಚಿರಶಾಂತಿ ದೊರಕಿಸಿ*
*ಕೊಡುವಂತಾಗಲೆಂದು ತಮ್ಮೆಲ್ಲರ ಪ್ರಾರ್ಥನೆ.*

ಲೇಖಿನ: ಕಾಸ್ಪಡಿ ಮೋಣಪ್ಪ ಗೌಡ, ಬೆಂಗಳೂರು Ph. : 3374050

## ಬಕ್ಕತಕೊಲ್ಲಿ ಹಾಗೂ ಕೊಡವ ಕುಂದು ಬಗ್ಗೆ ಕೊಡವ ನ್ಯಾಷನಲ್ ಸಂಘಟನೆಯ ಅತಿಕ್ರಮಣದ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ :

ಈ ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ ಈ ಹಿಂದೆ ಕಲಿಯಂಡ ಕುಟುಂಬದ ಮಾಜಿ ಸೈನಿಕರಾದ ತಂದೆ ಮತ್ತು ಮಗನು ಶ್ರೀ ಪಾಡಿ ಇಗ್ಗುತ್ತಪ್ಪ ದೇವಾಲಯದ ಜಾಗವನ್ನು ಅತಿಕ್ರಮಿಸಿ ಕೊಂಡಿದ್ದರು. ಈ ಅತಿಕ್ರಮಣ ಜಾಗವನ್ನು ಕೊಡಗು ಜಿಲ್ಲಾ ದೇವಸ್ಥಾನ ಸಮಿತಿ ವತಿಯಿಂದ ಕಂದಾಯ ಇಲಾಖೆ ಮುಖಾಂತರ ಅವರುಗಳನ್ನು ತೆರವುಗೊಳಿಸಲಾಯಿತು. ಆದರೆ ಅವರಿಬ್ಬರೂ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದಾಗ ಜಿಲ್ಲಾಧಿಕಾರಿಗಳು ಮತ್ತು ಉಪವಿಭಾಗಾಧಿಕಾರಿಗಳು ಗಾಳಿಬೀಡು ಗ್ರಾಮದಲ್ಲಿ ಅವರಿಬ್ಬರಿಗೆ ಜಾಗ ನೀಡುತ್ತೇವೆಂದು ಉಚ್ಚನ್ಯಾಯಾಲಯಕ್ಕೆ ಪ್ರಮಾಣಪತ್ರ ಸಲ್ಲಿಸಿದ್ದು ಈ ಇಬ್ಬರು ಗಾಳಿಬೀಡುವಿನಲ್ಲಿ ತಮಗಳಿಗೆ ಜಾಗ ಬೇಡವೆಂದಾಗ ಉಪ ವಿಭಾಗಧಿಕಾರಿಯವರು ತಂದೆ ಮಗನ ಆಮಿಷಕ್ಕೆ ಬಲಿ ಆಗಿ, ಎರಡನೇ ಮೊಣ್ಣಂಗೇರಿ ಗ್ರಾಮದಲ್ಲಿ ಜಾಗ ನೀಡಬಹುದೆಂದು ಜಲ್ಲಾಧಿಕಾರಿಯವರಿಗೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಇದಾದ ಕೂಡಲೇ ತಂದೆ ಮಗರಿಬ್ಬರು ಸೇರಿ ಎರಡನೇ ಮೊಣ್ಣಂಗೇರಿ ಗ್ರಾಮದಲ್ಲಿ ಸುಮಾರು ಹದಿನೈದು ವರ್ಷಗಳಿಂದ ಜಾಗವನ್ನು ಅತಿಕ್ರಮಿಸಿ ಯಾಲಕ್ಕಿ ಸಾಗುವಳಿ ಮಾಡಿಕೊಂಡಿದ್ದ ಮಾಜಿ ಸೈನಿಕರಾದ ಪಟ್ಟಡ ಮತ್ತು ಬಿಟ್ಟೀರ ಮನೆಯವರನ್ನು ರೌಡಿಗಳಿಂದ ಹೊರ ಹಾಕಿ ಈಗ ಅತಿಕ್ರಮಿಸಿಕೊಂಡಿದ್ದಾರೆ. ಅವರಿಗಿನ್ನೂ ಸದರಿ ಜಾಗವೂ ಮಂಜೂರಾಗಿರುವುದಿಲ್ಲ. ಆದರೆ ಬಿಟ್ಟೀರ ಮತ್ತು ಪಟ್ಟಡ ಕುಟುಂಬದ ಮಾಜಿ ಸೈನಿಕರು ಟಿ. ಟಿ. ದಂಡಗಳನ್ನು ಪಾವತಿಸಿದ ದಾಖಲೆಗಳು ಇವೆ.

ಈಗ ಕೊಡವ ನ್ಯಾಶನಲ್ ಕೌನ್ಸಿಲ್ ಎಂದು ಹೇಳಿ ಕೊಂಡಿರುವ ಸರಕಾರದ ಮಾನ್ಯತೆ ಪಡೆಯದ ಅಥವಾ ನೊಂದಣಿ ಆಗದ ಸಂಘಟನೆಯೊಂದು, ಯವಕ ಪಾಡಿ ಗ್ರಾಮಕ್ಕೆ ಸೇರಿದ ತಡಿಯಂಡ ಮೋಳ್ ತಪ್ಪಲಿನಲ್ಲಿ ಸಿ. ಮತ್ತು ಡಿ. ಜಾಗವಾಗಿದ್ದು, ಈಗಾಗಲೇ ಅರಣ್ಯ ಇಲಾಖೆಗೆ ಹಸ್ತಾಂತರಿಸಿರುವ ಇನ್ನೂರು (200) ಎಕರೆ ಜಾಗವನ್ನು ಸುಮಾರು ಆರು ತಿಂಗಳುಗಳಿಂದಲೇ ಅತಿಕ್ರಮಣ ಮಾಡಿಕೊಂಡು "ಕೊಡವ ಕುಂದು" ಎಂದು ಹೆಸರಿಸಿಕೊಂಡಿರುತ್ತಾರೆ. ಇದಕ್ಕೆ ಕಂದಾಯ ಇಲಾಖೆಯ ಎಲ್ಲಾ ಅಧಿಕಾರಿಗಳು ಹೊಣೆಗಾರರಾಗಿರುತ್ತಾರೆ. ಆದರೆ, ಈ ಹಿಂದೆ ಶ್ರೀ ಪಾಡಿ ಇಗ್ಗುತಪ್ಪ ದೇವಾಲಯಕ್ಕೆ ಸೇರಿದ ಜಾಗವನ್ನು ಅತಿ ಕ್ರಮಿಸಿದ್ದ ಕಲಿಯಂಡ ಕುಟುಂಬದ ಮಾಜಿ ಸೈನಿಕರಾದ ತಂದೆ ಮತ್ತು ಮಗ ಅವರಿಬ್ಬರಿಗೆ ಕೊಡವ ನ್ಯಾಷನಲ್ ಕೌನ್ಸಿಲ್‌ನವರು ಅತಿಕ್ರಮಿಸಿಕೊಂಡಿರುವ ಜಾಗವನ್ನು ಮಂಜೂರು ಮಾಡ ಬಹುದಾಗಿತ್ತು. ಇದನ್ನು ತಾವುಗಳು ಕೂಲಂಕುಷವಾಗಿ ಪರಿಶೀಲಿಸಬೇಕಾಗಿರುತ್ತದೆ.

ಕೊಡಗಿನ ಮೂರು ತಾಲ್ಲೂಕಿನ ಜನಾಂಗದ ವಿವರಗಳನ್ನು ಪರಿಶೀಲಿಸಿದರೆ, ವೀರಾಜಪೇಟೆ ತಾಲ್ಲೂಕಿನಲ್ಲಿ ಕೊಡವ ಜನಾಂಗದವರು ಅಧಿಕ. ಮಡಿಕೇರಿ ತಾಲ್ಲೂಕಿನಲ್ಲಿ ಗೌಡ ಜನಾಂಗದವರು ಅಧಿಕ ಮತ್ತು ಸೋಮವಾರಪೇಟೆ ತಾಲ್ಲೋಕಿನಲ್ಲಿ ಒಕ್ಕಲಿಗ, ವೀರಶೈವ, ಗೌಡರು ಬಿಳಿಮೊಗ್ಗದ ಜನಾಂಗದವರು ಅಧಿಕ. ಹೀಗಿದ್ದು, ಮಡಿಕೇರಿ ತಾಲ್ಲೂಕಿನಲ್ಲಿ ಕೊಡವ ನ್ಯಾಶನಲ್ ಕೌನ್ಸಿಲ್ ಸಂಘಟನೆಯೂ ಕೊಡವ ಕುಂದು ಎಂದು ಸ್ಥಾಪಿಸಲು ಸರಕಾರ ಜಾಗ ಮಂಜೂರು ಮಾಡಿದರೆ ನಾವು ಗೌಡ ಜನಾಂಗದವರು ಗಾಳಿಬೀಡುವಿನಲ್ಲಿ ಈಗಾಗಲೇ ಚಹಾ ತೋಟಕ್ಕೆ ನಿಗಧಿಪಡಿಸಿರುವ ಇನ್ನೂರ ಐವತ್ತು (250) ಎಕರೆ ಜಾಗವನ್ನು ಅತಿಕ್ರಮಿಸಿ ಕೊಡಗಿನ ಗೌಡ ಕುಂದು ಎಂದು ಸ್ಥಾಪಿಸುತ್ತೇವೆ. ಇದಕ್ಕೆ ಯಾವುದೇ ಅಡ್ಡಿ ಬಂದರೂ ನಾವುಗಳು ಸರಕಾರದಿಂದ ನೋಂದಾಣಿಯಾದ ಗೌಡ ಜನಾಂಗದ ಗೌಡ ಸಮಾಜಗಳು ಮತ್ತು ಸಂಘ ಸಂಸ್ಥೆಗಳಿಂದ ಗೌಡ ವಿದ್ಯಾ ಸಂಘ, ಗೌಡ ಸಾಂಸ್ಕೃತಿಕ ಅಕಾಡೆಮಿ ಮತ್ತು ಮಹಿಳಾ ಒಕ್ಕೂಟಗಳು ತೀವ್ರ ಹೋರಾಟಕ್ಕೆ ಇಳಿಯುತ್ತೇವೆ.

ಆದುದರಿಂದ, ಕೊಡಗಿನ ಜನತೆಯ ಹಿತದೃಷ್ಟಿಯಿಂದ ಕೊಡವ ಕುಂದ್ ನಿರ್ಮಿಸಲು ಕಂದಾಯ ಇಲಾಖೆಯವರು ಜಾಗ ಮಂಜೂರು ಮಾಡಿದರೆ ಖಂಡಿತ ಜನಾಂಗೀಯ ವಿಭಜನೆ ಮಾಡಿದಂತಾಗುವುದು.

ಆದುದರಿಂದ ಈ ಶ್ರೀ ಕಾವೇರಿ ಮಾತೆಯ ನೆಲದಲ್ಲಿ ಇದಕ್ಕೆ ಅವಕಾಶ ನೀಡಬಾರದೆಂದು ಕಳಕಳಿಯ ಮನವಿ.

*"ಸರ್ವರಿಗೂ ಸಮಪಾಲು ನಮ್ಮ ಧ್ಯೇಯ"*

-ಸೂದನ ವಿ. ನಾಣಯ್ಯ, ಕೊಡಗು ಗೌಡ ನಿವೃತ್ತಿ ನೌಕರರ ಸಂಘ, ಮಡಿಕೇರಿ.

ಸಿಗರೇಟ್‌ನ್ನು ಸೇದುವುದರಿಂದ ಆರೋಗ್ಯ ಕೆಡುತ್ತದೆ

# ಅಗಲಿದ ಯೋಧನಿಗೆ ಸ್ವಗ್ರಾಮ ಬಲ್ಲಮಾವಟಿಯಲ್ಲಿ ಅಂತಿಮ ನಮನ



ಜಮ್ಮು-ಕಾಶ್ಮೀರದ ದ್ರಾಸ್ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭ ಹಿಮಪಾತಕ್ಕೆ ಸಿಲುಕಿ ಸಾವನ್ನಪ್ಪಿದ. ಜಿಲ್ಲೆಯ ಯೋಧ ಹೊಸೊಕ್ಲು ಸುಂದರೇಶ್ ಅವರ ಪಾರ್ಥಿವ ಶರೀರದ ಅಂತ್ಯಕ್ರಿಯೆಯು 94 ದಿನಗಳ ಬಳಿಕ ಶೋಕ ಸಾಗರದ ನಡುವೆ 21-5-2003ರಂದು ಸ್ವಗ್ರಾಮ ಬಲ್ಲಮಾವಟಿಯಲ್ಲಿ ನಡೆಯಿತು. ಯೋಧ ಸುಂದರೇಶ್ 'ಅಮರ್‌ರಹೇ' "ಭಾರತ್ ಮಾತಾ ಕೀ ಜೈ" ಎಂಬ ಘೋಷಣೆಗಳೊಂದಿಗೆ ಅಗಲಿದ ಯೋಧನಿಗೆ ನೆರೆದಿದ್ದ ನೂರಾರು ಮಂದಿ ಅಂತಿನ ನಮನ ಸಲ್ಲಿಸಿದರು.

ಕಳೆದ ಫೆ. 17 ರಂದು ಕಾಶ್ಮೀರದ ದ್ರಾಸ್‌ವಲಯದಲ್ಲಿ ಆರು ಮಂದಿ ಎಂ. ಇ. ಜಿ. ಸಿಬ್ಬಂದಿಗಳು ಕಾರ್ಯಾಚರಣೆ ನಡೆಸುತ್ತಿದ್ದ ಸಂದರ್ಭ ಹಿಮಪಾತಕ್ಕೆ ಸಿಲುಕಿ ಯೋಧ ಸುಂದರೇಶ್ ಸಾವನ್ನಪ್ಪಿದ್ದರು. ಆ ಬಳಿಕ ದ್ರಾಸ್ ಹಾಗೂ ಲೆಹ್ ಪ್ರದೇಶಗಳಲ್ಲಿ ತೀವ್ರ ಹಿಮಪಾತವಾಗುತ್ತಿದ್ದ ಹಿನ್ನಲೆಯಲ್ಲಿ ಸುಂದರೇಶ್ ಅವರ ಶವ ಪತ್ತೆ ಅಸಾಧ್ಯವಾಗಿತ್ತು. ಅನಂತರದ 3 ತಿಂಗಳ ಬಳಿಕ ಹಿಮಪಾತ ಕ್ಷೀಣಗೊಂಡ ಹಿನ್ನಲೆಯಲ್ಲಿ ಮೇ 17 ರಂದು ಯೋಧ ಸುಂದರೇಷ್ ಅವರ ಪಾರ್ಥಿವ ಶರೀರ ಪತ್ತೆಯಾಗುವದರೊಂದಿಗೆ ಅಂದು ಸುಂದರೇಶ್‌ರೊಂದಿಗೆ ಮೃತಪಟ್ಟಿದ್ದ ಇತರ ಐವರು ಯೋಧರ ಪಾರ್ಥೀವ ಶರೀರಗಳು ದೊರೆತವು ಎಂದು ಬಲ್ಲಮಾವಟಿಗೆ ಸುಂದರೇಶ್ ಅವರ ಮೃತ ದೇಹವನ್ನು ತಂದಿದ್ದ ಎ. ಇ. ಜಿ. ಯೋಧ ಶಿವಕಾಶಿಯ ನಾಯಕ್ ಸುಬೇದಾರ್ ಜೀತ್‌ರಾಜ್ ವಿವರಿಸಿದರು.

ತಾ. 20 ರಂದು ಬೆಳಿಗ್ಗೆ 11 ಘಂಟೆಗೆ ಲೆಹ್‌ನಿಂದ ಹೊರಟು 12 ಗಂಟೆಗೆ ದೆಹಲಿ ತಲುಪಿ ಅಲ್ಲಿಂದ ಸಂಜೆ 4-30 ಗಂಟೆಗೆ ಹೊರಟು ಬೆಂಗಳೂರಿಗೆ ಸಂಜೆ 7ಗಂಟೆಗೆ ಬೆಂಗಳೂರು ತಲುಪಿದ ಯೋಧ ಸುಂದರೇಶ್ ಅವರ ಪಾರ್ಥಿವ ಶರೀರವನ್ನು ಬೆಂಗಳೂರಿನ ಸೇನಾ ಆಸ್ಪತ್ರೆಯಲ್ಲಿ ಇರಿಸಿ, ಅಂದು ಮುಂಜಾನೆ 5-30 ಗಂಟೆಗೆ ಬೆಂಗಳೂರಿನ ಸೇನಾ ವಾಹನದಲ್ಲಿ ಸ್ವಗ್ರಾಮದತ್ತ ತರಲಾಯಿತು. ಕುಶಾಲನಗರದ ತನಿಖಾ ಠಾಣೆ ಬಳಿ ಠಾಣಾಧಿಕಾರಿ ದೇವಯ್ಯ ನೇತೃತ್ವದ ತಂಡ ಬರಮಾಡಿಕೊಳ್ಳುವದ ರೊಂದಿಗೆ ಪುಷ್ಪಗುಚ್ಛ ಇರಿಸಿ ಗೌರವ ಸಲ್ಲಿಸಿತು. ಬಳಿಕ ಅಲ್ಲಿಂದ ಹೊರಟ ವಾಹನ ಮಡಿಕೇರಿಯ ಸುದರ್ಶನ ವೃತ್ತಕ್ಕೆ ಬರುತ್ತಿದ್ದಂತೆ ಜಿಲ್ಲಾ ಉಸ್ತುವಾರಿ ಸಚಿವ ಎಂ. ಎಂ. ನಾಣಯ್ಯ, ವಿಮಾನಯಾನ ಸಚಿವ ಟಿ. ಜಾನ್ ಹಾಗೂ ಪುರಸಭಾಧ್ಯಕ್ಷೆ ಕಾವೇರಮ್ಮ ಸೋಮಣ್ಣ ಅವರುಗಳು ಪುಷ್ಪಗುಚ್ಛ ಇರಿಸಿ ಗೌರವ ಸಲ್ಲಿಸಿದರು. ಅನಂತರ ಮಡಿಕೇರಿ ಪುರಭವನದಲ್ಲಿ 10 ನಿಮಿಷಗಳ ಕಾಲ ಯೋಧ ಸುಂದರೇಶ್ ಮೃತದೇಹವನ್ನು ಇರಿಸಲಾಗಿತ್ತು. ಈ ಸಂದರ್ಭ ಜಿಲ್ಲಾಧಿಕಾರಿ ಶ್ರೀಕಾಂತ್ ವಲಗದ್, ಪೊಲೀಸ್ ಉನ್ನತಾಧಿಕಾರಿ ಶರತ್‌ಚಂದ್ರ, ಉಪ ವಿಭಾಗಾಧಿಕಾರಿ ವಿ. ಜಿ. ಟೇಕ್‌ರಾಜ್, ಪುರಸಭಾಧ್ಯಕ್ಷೆ ಕಾವೇರಮ್ಮ ಸೋಮಣ್ಣ, ಜಿ.ಪಂ. ಸದಸ್ಯ ಹೊಸೂರು ಸತೀಶ್ ಕುಮಾರ್, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ, ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಚಿರಿಯಪಂಡ ರಾಜಾ ನಂಜಪ್ಪ ಸೇರಿದಂತೆ ನೂರಾರು ಮಂದಿ ಗಣ್ಯರು ಪಾರ್ಥಿವ ಶರೀರಕ್ಕೆ ಪುಷ್ಪಗುಚ್ಛ ಇರಿಸಿ ಗೌರವ ಸಲ್ಲಿಸಿದರು.

ಬಳಿಕ ಬೆಂಗಳೂರಿನಿಂದ ಸೇನಾ ವಾಹನದಲ್ಲಿ ಬಂದಿದ್ದ ಸುಂದರೇಶ್ ಸಹೋದ್ಯೋಗಿಗಳು ಸೇನಾ ಗೌರವ ಸಲ್ಲಿಸಿದ ನಂತರ ವಾಹನವು ಸ್ವಗ್ರಾಮ ಬಲ್ಲಮಾವಟಿಯತ್ತ ತೆರಳಿತು. ಮಧ್ಯಾಹ್ನ 1-30 ಗಂಟೆಗೆ ನಾಪೋಕ್ಲುವಿಗೆ ಪಾರ್ಥಿವ ಶರೀರ ಹೊತ್ತ ವಾಹನ ಆಗಮಿಸಿದಾಗ ಅಲ್ಲಿನ ನಿರೀಕ್ಷಣಾ ಮಂದಿರದ ಬಳಿ ಆಟೋ ಚಾಲಕರ ಸಂಘದ ವತಿಯಿಂದ ಹೂ ಗುಚ್ಛ ಇರಿಸಿ ಬರಮಾಡಿಕೊಳ್ಳಲಾಯಿತು. ಅಲ್ಲಿಂದ ಮೆರವಣಿಗೆಯಲ್ಲಿ ಕೊಂಡೊಯ್ದು ಗ್ರಾ. ಪಂ. ವತಿಯಿಂದ ಪಟ್ಟಣದ ಕೇಂದ್ರ ಭಾಗದಲ್ಲಿ ಕೆಲಹೊತ್ತು ಸಾರ್ವಜನಿಕ ದರ್ಶನಕ್ಕೆ ಇಡಲಾಗಿತ್ತು. ಈ ಸಂದರ್ಭ ಗ್ರಾ. ಪಂ. ಅಧ್ಯಕ್ಷ ಅಬ್ದುಲ್ ರೆಹಮಾನ್ ಮಾಜಿ ಉಪಾಧ್ಯಕ್ಷ ಎಂ. ಕೆ. ನಜೀರ್ ಡಾ. ಎಸ್. ಎಂ. ಕಾವೇರಪ್ಪ, ಕೊಡವ ಸಮಾಜದ ಅಧ್ಯಕ್ಷ ಮಣವಟ್ಟಿರ ಮಾಚಯ್ಯ ಮೊದಲಾದವರು ಗೌರವ ಸಲ್ಲಿಸಿದರು. ಅನಂತರ ಪಾರ್ಥಿವ ಶರೀರವನ್ನು ಬಲ್ಲಮಾಟಿಗೆ ಕೊಂಡೊಯ್ಯಲಾಯಿತು. ಯೋಧ ಸುಂದರೇಶ್ ಅವರನ್ನು ಹೊತ್ತ ವಾಹನ ಸ್ವಗ್ರಾಮ ಪ್ರವೇಶಿಸುತ್ತಲೇ ಕಳೆದ 94 ದಿನಗಳಿಂದ ಕೇವಲ ಪುತ್ರನ ಸಾವಿನ ಸುದ್ಧಿಯಿಂದಲೇ ಪರಿತಪಿಸುತ್ತಿದ್ದ ತಾಯಿ ಸೀತಮ್ಮ, ಸಹೋದರ ವಸಂತ್, ಸಹೋದರಿ ಶಾಂತಿ ಹಾಗು ನೆರೆದ ಗ್ರಾಮಸ್ಥರ ದುಃಖದ ಕಟ್ಟೆ ಒಡೆದು ಕಣ್ಣೀರ್ಗರೆದ ದೃಶ್ಯ ಕಲ್ಲು ಹೃದಯವನ್ನು ಕರಗಿಸುವಂತಿತ್ತು. ಬಳಿಕ 2 ಗಂಟೆಗಳ ಕಾಲ ಯೋಧನ ಮನೆಯಂಗಳದಲ್ಲಿ ಪಾರ್ಥಿವ ಶರೀರವನ್ನು ಸಾರ್ವಜನಿಕ ದರ್ಶನಕ್ಕೆ ಇಡಲಾಗಿತ್ತು. ಈ ಸಂದರ್ಭ ಜಿಲ್ಲಾ ಬಿಜೆಪಿ ಅಧ್ಯಕ್ಷ ಕೆ. ಜಿ. ಬೋಪಯ್ಯ, ಬಲ್ಲಮಾವಟಿ ಗ್ರಾ.ಪಂ. ಅಧ್ಯಕ್ಷೆ ಐಸಮ್ಮ ಉಸ್ಮಾನ್, ಉಪಾಧ್ಯಕ್ಷ ನೆರವಂಡ ಉಮೇಶ್, ನಾಗರಿಕ ಪ್ರಮುಖರಾದ ಮನುಮುತ್ತಪ್ಪ, ಕಿಶೋರ್ ಕುಮಾರ್ ಮೊದಲಾದವರು ಹೂ ಗುಚ್ಛ ಇರಿಸಿ ಅಂತಿಮ ನಮನ ಸಲ್ಲಿಸಿದರು. ಆ ಬಳಿಕ ಕುಟುಂಬಸ್ಥರು ಗೌಡ ಜನಾಂಗದ ಸಂಪ್ರದಾಯದಂತೆ ಅಂತಿಮ ವಿಧಿ ವಿಧಾನಗಳನ್ನು ನೆರವೇರಿಸಿದರು. ಅನಂತರ ಹೊಸೊಕ್ಲು ಕುಟುಂಬಸ್ಥರ ಸ್ಮಶಾನಕ್ಕೆ ಯೋಧನ ಪಾರ್ಥಿವ ಶರೀರವನ್ನು ಕೊಂಡೊಯ್ಯಲಾಯಿತು. ಈ ಸಂದರ್ಭ ಜಿಲ್ಲಾ ಸಶಸ್ತ್ರ ಪೊಲೀಸ್ ಪಡೆ, ಎಂ. ಇ. ಜಿ. ಸೇನಾ ತಂಡಗಳ ಸಿಬ್ಬಂದಿ ಮೂರು ಸುತ್ತು ಕುಶಲತೋಪು ಸಿಡಿಸುವ ಮೂಲಕ ಅಗಲಿದ ಯೋಧನಿಗೆ ಅಂತಿಮ ಗೌರವ ನೀಡಿದರು. ಬಳಿಕ ಸೇನಾಧಿಕಾರಿಗಳು ಸುಂದರೇಶ್ ಅವರ ಪಾರ್ಥಿವ ಶರೀರವಿದ್ದ ಪೆಟ್ಟಿಗೆಗೆ ಹೊದಿಸಿದ್ದ ರಾಷ್ಟ್ರಧ್ವಜವನ್ನು ತಾಯಿ ಸೀತಮ್ಮ ಅವರಿಗೆ ಹಸ್ತಾಂತರಿಸಿದರು. 94 ದಿನಗಳಿಂದ ಸೋದರನ ಶವದ ನಿರೀಕ್ಷೆಯಲ್ಲಿದ್ದ ಸಹೋದರ ವಸಂತ್ ಮಧ್ಯಾಹ್ನ 3-45 ಗಂಟೆಗೆ ಚಿತೆಗೆ ಅಗ್ನಿಸ್ಪರ್ಶ ಮಾಡಿದರು.

ಈ ಸಂದರ್ಭ ಮಡಿಕೇರಿ ಉಪ ವಿಭಾಗದ ಡಿ. ವೈ. ಎಸ್ಪಿ. ರಾಜಪ್ಪ, ವೃತ್ತ ನಿರೀಕ್ಷಕ ಸುಂದರ್‌ರಾಜ್, ನಾಪೋಕ್ಲು ಠಾಣಾಧಿಕಾರಿ ಆರ್.ರಂಗರಾಜು ಹಾಗೂ ಸಿಬ್ಬಂದಿ ಭದ್ರತಾ ಉಸ್ತುವಾರಿ ವಹಿಸಿದ್ದರು.

- ಚಿತ್ರ ವರದಿ : ಇ.ಕೆ. ತಿಮ್ಮಪ್ಪ

D ಮ್ಮಗಿರುವ ಬೆಳಕಿನಲ್ಲಿ ಓದಬಾರದು

# ಆಜಾದಿ ಬಚಾವೋ ಆಂದೋಲನ



ಇಂದು ಸದ್ಯ 4600 ವಿದೇಶಿ ಕಂಪೆನಿಗಳು ಆರ್ಥಿಕ ಉದಾರೀಕರಣ ನೀತಿಯ ಲಾಭವನ್ನು ಉಪ ಯೋಗಿಸಿ, ಭಾರತದಲ್ಲಿ ಕೇವಲ ಸಾಬೂನು, ಚಿಪ್ಸ್ ಉಪ್ಪು, ಶಾಂಪು ಇತ್ಯಾದಿ ಶೂನ್ಯ ತಂತ್ರಜ್ಞಾನದ ವಿದೇಶೀ ವಸ್ತುಗಳ ಮಾರಾಟ ದಿಂದಾಗಿ ಕನಿಷ್ಠ 93 ಸಾವಿರ ಕೋಟಿ ರೂ. ಹಣವನ್ನು ಲೂಟಿ ಮಾಡುತ್ತಿವೆ.

ದೇಶದಲ್ಲಿ 20 ಕೋಟಿ ಜನರು ನಿರುದ್ಯೋಗಿಗಳಾಗಿದ್ದಾರೆ. ಅಲ್ಲದೇ 45 ಕೋಟಿ ಜನರು ಬಡತನದ ರೇಖೆಗಿಂತ ಕೆಳಮಟ್ಟದ ಜೀವನ ನಡೆಸಬೇಕಾದ ಪರಿಸ್ಥಿತಿ ಬಂದಿದೆ. ಬಡತನದ ರೇಖೆಗಿಂತ ಕೆಳಮಟ್ಟದ ಜನ ಎಂದರೆ, ವ್ಯಕ್ತಿಯ ವಾರ್ಷಿಕ ಉತ್ಪನ್ನ ಕೇವಲ 3,000 ರೂಪಾಯಿ ಯಾಗಿರುತ್ತದೆ. ಅಂದರೆ ಕೇವಲ 250 ರೂಪಾಯಿಯಲ್ಲಿ ಪ್ರತಿ ತಿಂಗಳು ಜೀವನ ಮಾಡಬೇಕಾಗುತ್ತದೆ.

ವ್ಯಾಪಾರ ಉದ್ಯೋಗದಲ್ಲಿ ಇಷ್ಟೊಂದು ಹಣದುಬ್ಬರ ಬಂದಿದ್ದರಿಂದ ಇವತ್ತಿನವರೆಗೆ 4 ಲಕ್ಷ ಕಾರ್ಖಾನೆಗಳು ಬಂದಾಗಿವೆ. 6 ಲಕ್ಷ ಸಣ್ಣ ಕೈಗಾರಿಕೆಗಳು ಕೈ ಮಗ್ಗ ಹಾಗೂ ಯಂತ್ರಚಾಲಿತ ಮಗ್ಗಳು ಮುಚ್ಚಿಹೋಗಿವೆ. ಇದಲ್ಲದೆ ಸಾವಿರಾರು ಕಾರ್ಖಾನೆಗಳು ಮುಚ್ಚುವ ಸ್ಥಿತಿಯಲ್ಲಿವೆ. ಈ ಹಣ ದುಬ್ಬರ ಕಾರಣದಿಂದ ಸಾವಿರಾರು ವ್ಯಾಪಾರಿಗಳು ದಿವಾಳಿಯಾಗಿದ್ದಾರೆ.

ಈಗ 18ಲಕ್ಷ ಕೋಟಿ ರೂಪಾಯಿ ನಮ್ಮ ದೇಶದ ಮೇಲೆ ಸಾಲವಿದೆ. ಇದರಿಂದ ನಮ್ಮ ದೇಶದ ಪ್ರತಿಯೊಬ್ಬ ನಾಗರಿಕ 18,000 ರೂಪಾಯಿ ಸಾಲಕ್ಕೆ ಹೊಣೆಗಾರನಾಗಿದ್ದಾನೆ.

ಭಾರತ ಸ್ವಾತಂತ್ರ್ಯ ಪಡೆದಾಗ ಅಂದರೆ ಕ್ರಿ. ಶ. 1947 ರ ಇಸವಿಯಲ್ಲಿ 1 ಡಾಲರ್ 1.20 ಪೈಸೆಗೆ ಸಮನಾಗಿತ್ತು. ಆದರೆ ಇಂದಿನ ದಿನಗಳಲ್ಲು 1 ಡಾಲರ್ ಎಂದರೆ ಭಾರತದ 50 ರೂಪಾಯಿಯಾಗಿದೆ. ಅಂದರೆ ಭಾರತದ ರೂಪಾಯಿಯ ಬೆಲೆ ಶೇಕಡಾ 500ರಷ್ಟು ಕಡಿಮೆಯಾಗಿದೆ.

ಕ್ರಿ. ಶ. 1947 ರಲ್ಲಿ ನಮ್ಮ ದೇಶದ ಮೇಲೆ ಯಾವ ವಿದೇಶಿ ಸಾಲ ಇರಲಿಲ್ಲ ಮತ್ತು ಯಾವ ತರಹದ ವಿದೇಶಿ ವ್ಯಾಪಾರದಲ್ಲಿ ನಷ್ಟವಿರಲಿಲ್ಲ.

ಇವತ್ತಿನವರೆಗೆ 26,600 ಕೋಟಿ ರೂಪಾಯಿ ವಿದೇಶಿ ವ್ಯಾಪಾರದಲ್ಲಿ ನಷ್ಟವಾಗಿದೆ. ನಮ್ಮನ್ನು ಮರಳು ಮಾಡಿ ಅವಶ್ಯವಿಲ್ಲದ ಮತ್ತು ಹಾನಿಕಾರಕ ಔಷಧಿಗಳನ್ನು ತಿನ್ನಲೇ ಬೇಕಾದ ಪರಿಸ್ಥಿತಿಯನ್ನುಂಟು ಮಾಡಿದ್ದಾರೆ.

ವಿದೇಶಿ ಕಂಪೆನಿಗಳು ತಮ್ಮ ಉತ್ಪಾದನೆಯನ್ನು ಮಾರಾಟ ಮಾಡಲು ದೂರದರ್ಶನದಲ್ಲಿ ಸುಳ್ಳು ನಾಟಕವಾಡುತ್ತವೆ ಮತ್ತು ತಮ್ಮ ಜಾಹೀರಾತನ್ನು ತೋರಿಸುವ ಸಲುವಾಗಿ ಸಾಕಷ್ಟು ಹಣವನ್ನು ಹೆಚ್ಚು ಮಾಡುತ್ತವೆ.ಪಾಶ್ಚಾತ್ಯ ಸಂಸ್ಕೃತಿಯನ್ನು ಹರಡಿಸುವ ಸಲುವಾಗಿ ಕಾಮುಕ, ಅಶ್ಲೀಲ ಹಾಗೂ ಹಿಂಸೆಯ ಧಾರಾವಾಹಿಗಳಿಗೆ ಪ್ರಾಯೋಜನ ಮಾಡುತ್ತವೆ. ಇದರಿಂದ ನಮ್ಮ ಮನೆಗಳಲ್ಲಿ ವಿದೇಶಿ ಸಾಮಾನುಗಳು ರೂಢಿಯಲ್ಲಿ ಬರುತ್ತವೆ. ಯುವ ಪೀಳಿಗೆ ತಪ್ಪು ದಾರಿಯನ್ನು ಹಿಡಿಯಲಾರಂಭಿಸಿದ್ದಾರೆ.

ಭ್ರಷ್ಟಾಚಾರ ಮತ್ತು ಅನೇಕ ಮಾಧ್ಯಮಗಳ ಮೂಲಕ ರಾಜಕಾರಣಿಗಳಿಂದ ಹಿಡಿದು ಮಂತ್ರಿಗಳವರೆಗೆ ಎಲ್ಲರನ್ನು ಖರೀದಿಸಿ ಅಪ್ರತ್ಯಕ್ಷ ರೂಪದಲ್ಲಿ ಭಾರತದ ಮೇಲೆ ರಾಜ್ಯಭಾರ ಮಾಡುತ್ತಿದ್ದಾರೆ.

ಭಾರತದ ರಾಜ ನೈತಿಕ ಸಾಂಪ್ರದಾಯಿತ್ವ ಮುಕ್ತಾಯ ಗೊಂಡಿದೆ. ಭಾರತದ ಕೃಷಿ ವಿದೇಶೀಕರಣವಾಗಿದೆ. ಭಾರತದ ಕೃಷಿ ವಿದೇಶೀಕರಣವಾದ್ದರಿಂದ ಭಾರತದ 1,50,000 ಎಕರೆ ಭೂಮಿ ಬಂಜರಾಗಿದೆ. ಕೃಷಿ ಉತ್ಪಾದನೆಯ ಮಟ್ಟ ಮತ್ತು ಉತ್ಪಾದನೆ ಪ್ರತಿ ವರ್ಷ ಕಡಿಮೆಯಾಗುತ್ತಾ ನಡೆದಿದೆ.

### *ನಾವು ವಿದೇಶಿ ಕಂಪನಿಗಳ ಸಾಮಾನುಗಳನ್ನು ಏಕೆ ಖರೀದಿಸುತ್ತಿದ್ದೇವೆ ?*

ದೂರ ದರ್ಶನದಲ್ಲಿ ಸುಳ್ಳು ಜಾಹೀರಾತು ತೋರಿಸಿ ಅಂಧ ವಿಶ್ವಾಸವನ್ನು ಹುಟ್ಟಿಸಿ ಅವರ ಸಾಮಾನುಗಳನ್ನು ಖರೀದಿಸುವ ಪ್ರಸಂಗವನ್ನು ನಿರ್ಮಾಣ ಮಾಡುತ್ತಿವೆ.

ದೇಶಕ್ಕೆ ಇಷ್ಟೊಂದು ನಷ್ಟವಾಗುತ್ತಿರುವಾಗಲೂ ನಮಗೆ ತಿಳಿಯದೆ ನಾವು ಮಾನಸಿಕ ಗುಲಾಮರಾಗುವಂತೆ ಮಾಡಲಾಗಿದೆ. ನಾವು ನಮ್ಮದಲ್ಲದೇ ನಮ್ಮ ದೇಶ ನಷ್ಟವಾಗಲು ಸ್ವಂತ ಜೇಬಿನಲ್ಲಿದ್ದ ಹಣವನ್ನು ವಿದೇಶಗಳಿಗೆ ಕೊಡುತ್ತಾ ಇದ್ದೇವೆ.

ಈಗ ನಮ್ಮ ದೇಶದಲ್ಲಿ ವಿದೇಶಿ ಉಪ್ಪು ಮಾರಾಟ ವಾಗುತ್ತಿದೆ. ಉಪ್ಪಿನ ಬೆಲೆ 50 ಪೈಸೆಯಿಂದ ರೂ 8 ಕ್ಕೆ ಏರಿದೆ. ಸ್ವಲ್ಪ ಯೋಚಿಸಿ, ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹವನ್ನು ಮಾಡಿದ್ದಾದರೂ ಏಕೆ?

ನಾವು ನಮ್ಮ ದೇಶಕ್ಕಾಗುವ ನಷ್ಟವನ್ನು ನಿಲ್ಲಿಸ ಬಹುದೇನು?

### *ಅವಶ್ಯಕವಾಗಿ ಶೇಕಡ 101 ನಿಲ್ಲಿಸಬಹುದು.*

### *ಯಾವ ರೀತಿಯಲ್ಲಿ ?*

ಎಲ್ಲಕ್ಕಿಂತಲೂ ಮೊದಲು ಈ ಕ್ರಾಂತಿ ನಮ್ಮ ಮನೆಗಳಿಂದಲೇ ಕೇವಲ ಆತ್ಮ ವಿಶ್ವಾಸ ಹಾಗೂ ನಿಷ್ಠೆಯಿಂದ ಪ್ರಾರಂಭವಾಗಬೇಕು. ಇದಕ್ಕಾಗಿ ಮೊಟ್ಟಮೊದಲು ನಾವು ಎಲ್ಲಾ ವಿದೇಶಿ ಸಾಮಾನುಗಳನ್ನು ಖರೀದಿಸುವುದನ್ನು ನಿಲ್ಲಿಸಬೇಕು. ಭಾರತಕ್ಕೆ ಹೊಸ ಸಂಪೂರ್ಣ ಸ್ವಾತಂತ್ರ್ಯ ತರಬೇಕು ಆಗಲೇ ನಮ್ಮ ದೇಶಕ್ಕಾಗಿ ಮಡಿದ 6 ಕೋಟಿ ವೀರರ ಆತ್ಮಕ್ಕೆ ಶಾಂತಿ, ಆಗಲೇ ಕಾರ್ಗಿಲ್ ಯುದ್ಧದಲ್ಲಿ ಮಡಿದ ವೀರರ ಆತ್ಮಕ್ಕೆ ಶಾಂತಿ.

### *ನಿಮಗಿದು ತಿಳಿದಿರಲಿ*

"ದೇಶ ಉಳಿದರೆ ನೀವು ಉಳಿಯುವಿರಿ, ದೇಶ ಹಾಳಾದರೆ ನೀವೂ ಹಾಳಾಗುವಿರಿ".ಉದಾರೀಕರಣ,ಜಾಗತೀಕರಣ ಇತ್ಯಾದಿ ವಿದೇಶಿ ನೀತಿಗಳನ್ನು ಅಳವಡಿಸಿಕೊಂಡಿದ್ದ ಥೈಲ್ಯಾಂಡ್, ಮಲೇಶಿಯಾ, ಲ್ಯಾಟಿನ್ ಅಮೇರಿಕಾ, ಒಂದು ಕಾಲದಲ್ಲಿ ಏಷ್ಯನ್ ಟೈಗರ್ ಎನಿಸಿಕೊಂಡಿದ್ದ ದಕ್ಷಿಣ ಕೊರಿಯಾ, ಇತ್ಯಾದಿ ಎಲ್ಲಾ ದೇಶಗಳು ಮುಳುಗಿ ಹೋಗಿವೆ.

ಎಲ್ಲಕ್ಕಿಂತಲೂ ಹೆಚ್ಚಾಗಿ ವಿಶ್ವದ ಅತ್ಯಂತ ಬಲಿಷ್ಠ ರಾಷ್ಟ್ರವೆನಿಸಿಕೊಂಡಿದ್ದ ರಷ್ಯಾ ಮುಳುಗಿ ಹೋಗಿರುವುದು ಈ ಕಾರಣದಿಂದಲೇ, ಇತ್ತೀಚಿನ ಮತ್ತೊಂದು ಸೇರ್ಪಡೆ ಅರ್ಜೆಂಟೈನಾ.

ನೀವು ಮಾಡಬೇಕಾದ ಕೆಲಸವೇನು?

ನೀವು ನಿಮಗೆ ಬೇಕಾದ ವಸ್ತುಗಳನ್ನು ಖರೀದಿಸಬೇಕಾದರೆ ಈ ಕಾಗದದ ಹಿಂದೆ ಸೂಚಿಸಲ್ಪಟ್ಟ ಸ್ವದೇಶಿ ಸಾಮಾನುಗಳನ್ನು ಮಾತ್ರ ದಯವಿಟ್ಟು ಖರೀದಿಸಿ. ನೀರು, ಭೂಮಿ, ಗಾಳಿ ಸ್ವದೇಶಿಯಾಗಿರುವಾಗ ! ಸಾಮಾನುಗಳೇಕೆ ವಿದೇಶಿ !!!

*(ವಸ್ತುಗಳ ಪಟ್ಟಿಯನ್ನು ಮುಂದಿನ ಸಂಚಿಕೆಯಲ್ಲಿ ನೀಡಲಾಗುವುದು)*

## ವಿದೇಶಿ ವಸ್ತುಗಳನ್ನು ಏಕೆ ಖರೀದಿಸಬಾರದು ?




## ಸ್ವದೇಶಿ ವಸ್ತುಗಳನ್ನು ಏಕೆ ಖರೀದಿಸಬೇಕು ?




## ಜೀವನದಲ್ಲಿ ಯಶಸ್ಸನ್ನು ಹೇಗೆ ಸಂಪಾದಿಸಬೇಕು

1. ಸ್ಪಷ್ಟವಾದಿ ಆಗಿರಬೇಕು -ಕಠಿಣ ಹೃದಯ ಎಂದುಕೊಳ್ಳಬಹುದು
2. ಧೈರ್ಯ ಇರಬೇಕು -ಧೈರ್ಯ ಅವಶ್ಯಕ ಆದರೆ ಜನರನ್ನು ಸುಮ್ಮ ಸುಮ್ಮನೆ ಎದುರು ಹಾಕಿಕೊಳ್ಳಬಾರದು
3. ಛಲಗಾರಿಕೆ ಇರಬೇಕು - ಯಾವುದೇ ಕೆಲಸವನ್ನು ಬಿಡದಂತೆ ಮಾಡುವ ಛಲಗಾರಿಕೆ ಇರಬೇಕು.
4. ಶ್ರದ್ಧೆ ಇರಬೇಕು - ಮನುಷ್ಯನಿಗೆ ಶ್ರದ್ಧೆಯೇ ಪ್ರಮುಖ ಅಂಶ "ಬೆಂಕಿ ಹತ್ತಿದಾಗ ಬಾವಿತೋಡಬಾರದು"
5. ಪ್ರಭುತ್ವ ಸಾಧಿಸಬೇಕು - ಕೆಲಸದಲ್ಲಿ ಪ್ರಭುತ್ವ ಸಾಧಿಸಿ ಕಾರ್ಯಗತ ಗೊಳಿಸಬೇಕು.
6. ಸಮಗ್ರ ದೃಷ್ಟಿ ಇರಬೇಕು - ಬಾವಿಯಲ್ಲಿರುವ ಕಪ್ಪೆಯಂತಾಗದೆ ಮುಕ್ತ ಭಾವನೆ ಇರಬೇಕು. ಯಾವುದೇ ಕಾರಣದಿಂದ ಸಂಕುಚಿತನ ತಂದು ಕೊಳ್ಳಬಾರದು.
7. ಸಮಯ ಪರಿಪಾಲನೆ - ಸಮಯ ಪ್ರಜ್ಞೆ ಬೆಳೆಸಿಕೊಳ್ಳಬೇಕು.
8. ಸ್ನೇಹಮಯ ಕರುಣಾಮಹಿ ಆಗಿರಬೇಕು.
9. ಪರೋಪಕಾರ ಮನೋಭಾವ - ಇರಬೇಕು ಸ್ವಾರ್ಥತೆ ಸಲ್ಲದು
10. ವಾಕ್ಚಾತುರ್ಯ ಇರಬೇಕು ಮಾತೇ ಮುತ್ತು ಮಾತೇ ಮೃತ್ಯು ಇವೆರಡಕ್ಕೂ ಕಾರಣ ಮಾತು.
11. ಯೋಜನೆ ಹಾಕಿಕೊಳ್ಳಬೇಕು - ಯಾವುದೇ ಅತ್ಯಂತ ಸಣ್ಣ ಕೆಲಸದಿಂದ ಹಿಡಿದು ಅತ್ಯಂತ ದೊಡ್ಡ ಕೆಲಸದವರೆಗೆ ಪೂರ್ವ ಯೋಜನೆ ಅತ್ಯಂತ ಅವಶ್ಯಕ.
12. ತಾಳ್ಮೆಯಿಂದಿರಬೇಕು ಯಾವಾಗಲೂ ಹಸನ್ಮುಖಿಯಾಗಿರಬೇಕು.

ಏಳು ಎದ್ದೇಳು ನಿನ್ನ ಭವಿಷ್ಯವನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯನ್ನು ಹೊರು. ನಿನ್ನ ಉತ್ತರೋತ್ತರ ಶ್ರೇಯಸ್ಸಿಗೆ ಬೇಕಾದ ಎಲ್ಲಾ ಶಕ್ತಿ ಸಾಮರ್ಥ್ಯಗಳೂ ನಿನ್ನೊಳಗೇನೆ ಇವೆ. ನೋಡು, ಮನ ಮಾಡು ಏಳು ಎದ್ದೇಳು ನಿನ್ನ ಭವ್ಯ ಭವಿಷ್ಯತ್ತಿನ ನಿರ್ಮಾಣಕ್ಕೆ ಇಂದೇ ಅಡಿಪಾಯ ಇಡು.

-ಸ್ವಾಮಿ ವಿವೇಕಾನಂದ, ಸಂಗ್ರಹ : ಸಂಗಾತಿ

**F ಶ್ ಮಾಡುವುದನ್ನು ಕಲಿಯಬಾರದು**

# ಸಮಾಜದ ಅಭಿವೃದ್ಧಿಗೆ ನಿರಂತರ ಸ್ಪಂದನ ತೋರಿದ ಗೌಡ ಸಮಾಜ.



ಸಮಗ್ರ ಸಮಾಜದ ಅಭಿವೃದ್ಧಿಗೆ ನಿರಂತರ ಸ್ಪಂದನದ ಮೂಲಕ ಮಹತ್ವದ ಕೊಡುಗೆಗಳನ್ನು ಗೌಡರ ಸಮಾಜ ನೀಡುತ್ತಾ ಬಂದಿದೆ ಎಂದು ಕರ್ನಾಟಕ ವಿಧಾನ ಪರಿಷತ್‌ನ ಸಭಾಪತಿ ಶ್ರೀ ಬಿ. ಎಲ್. ಶಂಕರ್ ಅವರು ಅಭಿನಂದಿಸಿದರು.

ಕೂಳೂರಿನ ಕುವೆಂಪು ನಗರದ ಕುರುಂಜಿ ವೆಂಕಟ್ರಮಣ ಗೌಡ ಸಭಾಂಗಣದಲ್ಲಿ ಅವರು ಗೌಡರ ಬೃಹತ್ ಸಮ್ಮೇಳನದ ಸಮಾರೋಪದ ಅಧ್ಯಕ್ಷತೆಯನ್ನು ವಹಿಸಿದ್ದರು. ಮಂಗಳೂರು ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘದ ಬೆಳ್ಳಿ ಹಬ್ಬದ ಅಂಗವಾಗಿ ಸಂಘದ ಮಾಜಿ ಅಧ್ಯಕ್ಷರು, ಕಾರ್ಯದರ್ಶಿಗಳು, ಸ್ಥಾಪಕ ಸದಸ್ಯರು ಹಾಗೂ ಹಾಲಿ ನಿರ್ದೇಶಕರನ್ನು ಸನ್ಮಾನಿಸಿದರು.

ಜಾತೀಯ ಸಮ್ಮೇಳನಗಳ ಸಂಘಟನೆಯ ಬಗ್ಗೆ ಸಮಾಜದಲ್ಲಿ ವಿವಿಧ ಅಭಿಪ್ರಾಯಗಳಿವೆ. ಆದರೆ, ಯಾವುದೇ ನಿರ್ದಿಷ್ಟ ಸಮಾಜದ ಪರಂಪರೆ, ಸಂಪ್ರದಾಯ, ಇತಿಹಾಸ, ವಿಶೇಷಗಳ ಅವಲೋಕನವೇ ಆಗಿರುತ್ತದೆ. ಒಟ್ಟು ಸಮಾಜದ ಹಿತಾಸಕ್ತಿಯ ರಕ್ಷಣೆಗೆ ಪೂರಕವಾಗಿರುತ್ತದೆ. ಈ ಮಾತಿಗೆ ಯಶಸ್ವೀ ಸಮ್ಮೇಳನವೇ ಅತ್ಯುತ್ತಮ ನಿದರ್ಶನವಾಗಿದೆ ಎಂದು ಬಿ. ಎಲ್. ಶಂಕರ್ ವಿಶ್ಲೇಷಿಸಿದರು.

ಇಂತಹ ಸಮ್ಮೇಳನಗಳು ಜನಾಂಗಕ್ಕೆ ಮಾರ್ಗದರ್ಶಿಯಾಗಿವೆ. ಸಮುದಾಯದ ಬಗ್ಗೆ ಯಾವ ಜನಾಂಗ ಮತ್ತು ಎಳೆಯರಿಗೆ ತಿಳಿದುಕೊಳ್ಳುವ ವೇದಿಕೆಯಾಗಿರುತ್ತದೆ. ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಂಘಟನಾತ್ಮಕ ಶಕ್ತಿಯನ್ನು ತುಂಬಲು ಪ್ರೇರಕವಾಗಿರುತ್ತದೆ ಎಂದರು. ಗೌಡರ ಬೃಹತ್ ಸಮ್ಮೇಳನವು ಆದರ್ಶವಾಗಿ ನಡೆದಿದೆ. ಎಲ್ಲಾ ಜೀವರಾಶಿಗಳು ಒಂದೇ ಎಂಬ ವಿಶ್ವಮಾನವ ಸಂದೇಶ ಸಾರಿದ ಮಹಾ ಕವಿ, ರಸ ಋಷಿ ಕುವೆಂಪು ಅವರ ಹೆಸರನ್ನು ಸಮ್ಮೇಳನದ ನಗರಕ್ಕೆ ನೀಡಿರುವುದು ಮತ್ತಷ್ಟು ಅರ್ಥಪೂರ್ಣವಾಗಿದೆ ಎಂದು ಬಿ. ಎಲ್. ಶಂಕರ್ ಹೇಳಿದರು.

***ಸಂತೃಪ್ತಿ : ಇಡಿ. ವಿ. ಸದಾನಂದ ಗೌಡ***

ಸಮ್ಮೇಳನ ಯಶಸ್ವಿಯಾಗಿ ನಡೆದಿರುವುದು ಸಂತೃಪ್ತಿ ಹಾಗೂ ಸಾರ್ಥಕ್ಯವನ್ನು ನೀಡಿದೆ ಎಂದು ಗೌಡರ ಸಮ್ಮೇಳನ ಸಮಿತಿಯ ಅಧ್ಯಕ್ಷ, ಪುತ್ತೂರಿನ ಶಾಸಕ ಶ್ರೀ ಡಿ. ವಿ. ಸದಾನಂದ ಗೌಡ ಅಭಿಪ್ರಾಯಿಸಿದರು.

ವಿಧಾನ ಪರಿಷತ್ ಸದಸ್ಯೆ ಶ್ರೀಮತಿ ವಿಮಲಾ ಗೌಡ, ಮಡಿಕೇರಿ ಜಿ.ಪಂ. ಮಾಜಿ ಅಧ್ಯಕ್ಷೆ, ಶ್ರೀಮತಿ ಕೆ. ಪಿ. ಚಂದ್ರಕಲಾ ಬೆಂಗಳೂರು ವಿ. ವಿ. ನಿಲಯದ ಡಾ|| ಶ್ರೀಮತಿ ವಸಂತಿ ವಿಜಯ್ ಮುಂತಾದವರು ಉಪಸ್ಥಿತರಿದ್ದರು.

- ಸಂಗಾತಿ

---

## ಸ್ವಂತ ಚಿಂತನೆ ಮೇಲೆ ನಿಲ್ಲಿ : ಗೌಡರಿಗೆ ಆದಿಚುಂಚನಗಿರಿ ಶ್ರೀ ಕರೆ

ಇತರ ಸಮಾಜದಂತೆ ಗೌಡರ ಸಮಾಜವೂ ಸಂಘಟನೆಗೊಂಡು ಸ್ವಂತ ಚಿಂತನೆ ಮೇಲೆ ದೃಢವಾಗಿ ನೆಲೆ ನಿಲ್ಲಬೇಕಿದೆ ಎಂದು ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠಾಧೀಶರಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಇಂದಿಲ್ಲಿ ಕರೆ ನೀಡಿದರು.

ದಿನಾಂಕ 19-1-2003 ರಂದು ಕೂಳೂರಿನಲ್ಲಿ ನಡೆದ ಗೌಡರ ಬೃಹತ್ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಆಶೀರ್ವಚನ ನೀಡಿದ ಅವರು, ಗೌಡ ಸಮಾಜದವರು ಶ್ರಮ ವಹಿಸಿ, ಬೆವರು ಸುರಿಸಿ ಭೂಮಿ ತಾಯಿಯ ಸೇವೆಗಾಗಿ ದುಡಿದಿದ್ದಾರೆ. ಆದರೆ ಎಲ್ಲ ಸಮಾಜದಂತೆ ನಮ್ಮವರಿಗೆ ಎದ್ದು ನಿಲ್ಲಲು ಸಾಧ್ಯವಾಗಲಿಲ್ಲ. ಹಿಂದೆ ಅವಕಾಶ ವಂಚಿತರಾಗಿ ನಮ್ಮ ಸಮಾಜದಲ್ಲಿ 25 ವರ್ಷಗಳ ಹಿಂದೆ ವಿದ್ಯಾವಂತರಿರಲಿಲ್ಲ. ಈಗ ವಿದ್ಯಾವಂತ ಸಮಾಜವೆನಿಸಿದೆ. ಹಾಗಾಗಿ ಸಂಘಟನೆಯೂ ಬೇಕಿದೆ ಎಂದು ನುಡಿದರು.

ನಾವು ಸಂಘಟನೆ ಮಾಡುವುದು ಇನ್ನೊಂದು ಸಂಘಟನೆಯೊಂದಿಗೆ ಸಂಘರ್ಷಕ್ಕಾಗಿ ಅಲ್ಲ. ಸರ್ಕಾರದ ನೆರವು ಪಡೆದು, ಸಮಾನವಾಗಿ ಬದುಕುವ ಚಿಂತನೆಯನ್ನು ಜನರಲ್ಲಿ ಮೂಡಿಸಲು, ಯುವ ಜನಾಂಗದಲ್ಲಿ ಇಂದು ಸಿಡುಕಿನ ಮನೋಭಾವನೆಯನ್ನು ನಾವು ಕಾಣಬಹುದಾಗಿದೆ. ಸ್ವಂತಿಕೆಯನ್ನು ಉಳಿಸಿಕೊಂಡು ಹೋಗುವ ಮನಸ್ಥಿತಿಯೂ ಅವರಲ್ಲಿ ಉಳಿದಿಲ್ಲ. ಇದನ್ನೆಲ್ಲ ಸರಿದಾರಿಗೆ ತರುವ ನಿಟ್ಟಿನಲ್ಲಿ ಸಂಘಟನೆ ಅಗತ್ಯವಿದೆ ಎಂದು ಸ್ವಾಮೀಜಿ ನುಡಿದರು.

ಶ್ರೀ ಆದಿಚುಂಚನಗಿರಿ ಮಠ ಕರಾವಳಿ ಪ್ರದೇಶದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸುವುದು ಸ್ಪರ್ಧೆ ಮನೋಭಾವದಿಂದಲ್ಲ. ಬಡವರಿಗೆ, ಮಧ್ಯಮ ವರ್ಗದವರಿಗೆ ಸಹಾಯ ಮಾಡುವ ದೃಷ್ಟಿಯಿಂದ ಯೋಜನೆಗಳನ್ನು ರೂಪಿಸಲಾಗಿದೆ. ಶ್ರೀಮಂತರಿಂದ ತೆಗೆದುಕೊಂಡು ಬಡವರಿಗೆ ಹಂಚುವುದು ನಮ್ಮ ಕೆಲಸ. ಜೀವನದಲ್ಲಿ ಸಮನ್ವಯವನ್ನು ಬೋಧಿಸುವುದು ಕೂಡ ಸ್ವಾಮಿಗಳ ಕೆಲಸ ಎಂದು ಅವರು ಹೇಳಿದರು. ಹಳ್ಳಿಗಳಲ್ಲಿ ಇಂದು ಪ್ರೀತಿ-ವಾತ್ಸಲ್ಯ ಮಾಯವಾಗುತ್ತಿದೆ. ಕುಟುಂಬಗಳಲ್ಲಿ ಸಾಮರಸ್ಯದ ಕೊರತೆಯನ್ನು ಕಾಣುತ್ತಿದ್ದೇವೆ. ನಾವು ಕಳೆದುಕೊಂಡಿರುವ ಮಧುರ ಬಾಂಧವ್ಯಗಳನ್ನು ಮತ್ತೆ ಅಳವಡಿಸಿಕೊಳ್ಳುವ ಅಗತ್ಯವಿದೆ. ಜೀವನದಲ್ಲಿ ಸಹಕಾರವಿದ್ದರೆ ಅದೇ ಸ್ವರ್ಗ, ಅಸಹಕಾರವಾದರೆ ಅದೇ ನರಕ ಎಂದು ಸ್ವಾಮೀಜಿ ಬಣ್ಣಿಸಿದರು.

-ಸಂಗಾತಿ.

---

G ದ್ವಿನಿಂದ ಯಾರಿಗೂ ಮೋಸ ಮಾಡಬಾರದು

# ನಮ್ಮ ಜನಪದ ಆಟಗಳು



ಮನುಷ್ಯನಿಗೆ ಅನ್ನ ಬಟ್ಟೆಯಷ್ಟೇ ಆಟವೂ ಅತ್ಯವಶ್ಯ. ಪೃಥ್ವಿಯ ಮೇಲೆ ಹುಟ್ಟಿದಾಗಿನಿಂದ ಮಾನವ ಓಡುತ್ತಲೇ ಎಸೆಯುತ್ತಲೇ, ನೆಗೆಯುತ್ತಲೇ ಸಾಗಿದ್ದಾನೆ. ತಮಗೆ ಲಭಿಸಿದ ವಿರಾಮದಿಂದ ಮಾನವ ಕ್ರೀಡೆಗಾಗಿ ಓಡುವುದನ್ನು, ಎಸೆಯುವುದನ್ನು, ನೆಗೆಯುವುದನ್ನು ಮಾಡಲಾರಂಭಿಸಿದ. ಕಾಲಕ್ರಮೇಣ, ಕ್ರೀಡೆಗಳಿಗೆ ಸಂಘಟಿತ ರೂಪ ಒದಗಿಸಿದ ಕ್ರೀಡೆಗಳು ಕಲಾತೀತ, ಸ್ಥಳಾತೀತ, ಪ್ರತಿಯೊಂದು ಜನಪದ ಕ್ರೀಡೆಯೂ ಅದರದೇ ಆದ ಪ್ರಾದೇಶಿಕ ಹಿನ್ನಲೆಯನ್ನು ಒಳಗೊಂಡಿರುತ್ತದೆ. ಎಲ್ಲಾ ಪ್ರದೇಶಕ್ಕೂ ಸಲ್ಲುವ ಕೆಲವಾರು ಜನಪದ ಕ್ರೀಡೆಗಳು ವಿಸ್ತಾರವಾದ ಪ್ರಪಂಚದ ಉದ್ದಗಲಗಳಲ್ಲೂ ಹರಡಿ ಬಹುಬೇಗ ಆಧುನಿಕ ಕ್ರೀಡೆಗಳೆನಿಸಿಕೊಂಡವು. ಕೆಲವು ಕ್ರೀಡೆಗಳು ಅವು ಹುಟ್ಟಿಕೊಂಡ ಪ್ರದೇಶಕ್ಕೆ ಸೀಮಿತಗೊಂಡು ಪಲ್ಲಟಗೊಳ್ಳದೆ ಉಳಿದವು. ನೋಡಿ ಮಾಡಿ "ಕೃಷಿ ವಿಧಾನವೆಂತು" ತಂದೆಯಿಂದ ಮಗ ಕಲಿಯುತ್ತಿದ್ದನೋ ಅಂತೆಯೇ ತರುಣರು ಹಿರಿಯರಿಂದ ಆಟಗಳನ್ನು ಅನುಕರಣೆ ವೀಕ್ಷಣೆಗಳ ಮೂಲಕ ಕಲಿಯುತ್ತಿದ್ದರು. ಈ ಆಟಗಳ ಬಗ್ಗೆ ಪಾಠಗಳನ್ನು ಯಾರೂ ಬರೆದು ಇಡುತ್ತಿರಲಿಲ್ಲ. ಅವು ದೀರ್ಘಕಾಲದ ಅನುಭವ ಅನುಸಂಧಾನಗಳಿಂದ ರೂಪ ಪಡೆದಂತವು. ಅವು ಕಾಲಕಾಲಕ್ಕೆ ಪರಿವರ್ತನೆ ಹೊಂದುತ್ತಿದ್ದುದೂ ಉಂಟು. ಒಟ್ಟಿನಲ್ಲಿ ಅವು ಪೀಳಿಗೆಯಿಂದ ಪೀಳಿಗೆಗೆ ಹರಿಯುತ್ತವೆ. ಜನಪದ ಲಕ್ಷಣಗಳನ್ನು ಮೈಗೂಡಿಸಿಕೊಂಡಿದ್ದುವೆಂದೇ ಹೇಳಬೇಕು. ಆದರೆ ಅವುಗಳ ಉಗಮದ ಬಗ್ಗೆ "ಇದಮಿತ್ಥಂ" ಎಂದು ಹೇಳುವಂತಿಲ್ಲ. ಅವು ಜನಪದ ಸಂಪ್ರದಾಯದಿಂದ ಶಿಷ್ಟಸಂಪ್ರದಾಯಕ್ಕೆ ದಾಟಿದಾಗ ವ್ಯವಸ್ಥಿತ ಕ್ರೀಡೆಗಳಾಗಿ ಸಾಂಸ್ಥಿಕ ಸ್ವರೂಪವನ್ನು ಪಡೆಯುವಂತಾಯಿತು. ನೂರಾರು ಆಟಗಳು ಇಂದು ಮರೆಯಾಗುತ್ತಿದ್ದು ಕೆಲವೊಂದು ಆಟಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಲಾಗುವುದು.

***ಚೆನ್ನೆ :*** ಈ ಆಟಕ್ಕೆ ಪ್ರಾಚೀನ ಇತಿಹಾಸವಿದೆ. ಅನೇಕ ಪಾಡ್ದಾನಗಳಲ್ಲಿ ಚೆನ್ನೆಯಾಟದ ಉಲ್ಲೇಖ ಬರುತ್ತದೆ. ಸ್ಪರ್ಧಾ ಮನೋಭಾವನೆಯನ್ನು ಅಭಿವೃದ್ಧಿಗೊಳಿಸಿ, ಕೀಳರಿಮೆಯನ್ನು ಕಡಿಮೆಗೊಳಿಸುವ ಶಕ್ತಿ ಚೆನ್ನೆಯಾಟಕ್ಕಿದೆ. ಆದರೆ ಈ ಆಟದ ಅತಿಯಾದ ಸ್ಪರ್ಧಾ ಮನೋಭಾವನೆ ಮತ್ತು ಮೇಲರಿಮೆಯ ಫಲವಾಗಿ ಯುದ್ಧಗಳೇ ನಡೆದ ಕಥೆಗಳಿವೆ. ಆಟಗಾರರು ಹಿಂಸೆ ಮತ್ತು ಕ್ರೌರ್ಯಕ್ಕೆ ತೊಡಗಿ ಸಂಸಾರ ಛಿದ್ರಗೊಂಡ ಘಟನೆಗಳಿವೆ. ಹೊಡೆದಾಟ ನಡೆದು ಸಾವು ಸಂಬವಿಸಿದ್ದು ಇದೆ. ಚೆನ್ನೆಯಾಟವನ್ನು ಗಂಡ ಹೆಂಡತಿ, ಅಕ್ಕ ತಂಗಿಯರು ಆಡಬಾರದೆಂದು ಕೆಲವು ವಿಧಿ ನಿಷೇಧಗಳು ಹುಟ್ಟಿಕೊಂಡಿವೆ. ಅದಕ್ಕೆ ಪುರಾಣದಲ್ಲಿ ಒಂದು ಕಥೆ ಕೂಡ ಇದೆ.

ಚೆನ್ನೆ ಒಳಾಂಗಣ ಆಟವಾಗಿ ಮನೋರಂಜನೆಗಾಗಿ ಮತ್ತು ಆಚರಣಾತ್ಮಕವಾಗಿ ಗಂಡು ಹೆಣ್ಣು ಎಂಬ ಬೇಧ ಭಾವವಿಲ್ಲದೆ ಎಲ್ಲಾ ಪ್ರಾಯದವರೂ ಆಡಬಲ್ಲಂತ ಒಂದು ಕಾಲಬದ್ಧ ಆಟವಾಗಿದೆ.

***ಚೆನ್ನೆಯಾಟವನ್ನು ಪ್ರಾರಂಭಿಸುವ ದಿನ ಮತ್ತು ಕೊನೆಗೊಳಿಸುವ ದಿನದ ಮಹತ್ವ***

ಆಟಿ ತಿಂಗಳು (ಆಷಾಡ ಮಾಸ) ನಮ್ಮಲ್ಲಿ ವಿಪರೀತ ಮಳೆ. ಹೊರಗೆ ಕಾಲಿಡಲೂ ಆಗದ ಪರಿಸ್ಥಿತಿ ಇರುತ್ತಿತ್ತು. ಕೂಡಿಟ್ಟ ಧಾನ್ಯಗಳೆಲ್ಲ ಮುಗಿದ ಪರಿಣಾಮವಾಗಿ ಕಡುಬಡತನ ಊಟ ತಿಂಡಿಗೆ ತಾತ್ಸಾರ ಇಂತಹ ಸಮಯದಲ್ಲಿ ಮನೆಯೊಳಗೆ ಕುಳಿತು ಈ ಆಟವನ್ನು ಆಡುತ್ತಿದ್ದರು.

"ಆಟಿ ಅಮಾವಾಸ್ಯೆಯ ದಿನ ಬೆಳಗ್ಗೆ ಎದ್ದು ಹಾಲೆ ಮರದ ಹಾಲು ಕುಡಿದು (ಔಷಧಿ) ನಂತರ ಪತ್ರೊಡೆ ತಿಂದು ಗದ್ದೆಗೆ ಹೋಗಿ, ಗದ್ದೆಯ ಮಧ್ಯಕ್ಕೆ ಕರಿಕೊಳ್ಳಿ ಕುತ್ತಿ (ಬಿದಿರಿನ ತುದಿಗೆ ಬೆಂಕಿ ಕೊಟ್ಟು, ನಂದಿಸಿ ಅದನ್ನು ಗದ್ದೆಗೆ ನೆಡಬೇಕು) ಬಂದು, ಚೆನ್ನೆಮಣೆಯನ್ನು ಅಟ್ಟದಿಂದ ತೆಗೆದು ಚೆನ್ನಾಗಿ ತೊಳೆದು ಆಟ ಆಡಲು ಶುರುಮಾಡುತ್ತಿದ್ದರು. ಕೃಷ್ಣಾಷ್ಟಮಿಯ ದಿನ ರಾತ್ರಿ ಜಾಗರಣೆ ಮಾಡುವುದರ ಮೂಲಕ ಈ ಆಟ ರಾತ್ರಿ ಪೂರ್ತಿ ಆಡಿ ಮಾರನೆ ದಿನ ಮಣೆಯನ್ನು ನೀರಿನಲ್ಲಿ ತೊಳೆದು ಎಣ್ಣೆ ತಿಕ್ಕಿ ಅಟ್ಟಕ್ಕೆ ಹಾಕಲಾಗುತ್ತದೆ. ಉಳಿದಂತೆ ಯಾವತ್ತೂ ಈ ಆಟವನ್ನು ಆಡುವ ಕ್ರಮವಿರುವುದಿಲ್ಲ.

***ಮಂಜೆಟ್ಟಿಮಣೆ :*** ಉತ್ತಮ ಮರದ ಮಣೆ ಮಂಜೆಟ್ಟಿ ಕಾಯಿ ಹಾಕುವಾಗ "ಝೇಂಕಾರ"ಶಬ್ದದಿಂದ ಕೂಡಿದ್ದಾಗಿರಬೇಕು. ಮಣೆಯನ್ನು ಆಯ(ವಾಸ್ತು) ಪ್ರಕಾರ ಮಾಡುತ್ತಿದ್ದರು. ಈಗಲೂ ಕೆಲವೂ ಮನೆಗಳಲ್ಲಿ ಅಂತಹ ಮಣೆಗಳನ್ನು ಕಾಣಬಹುದು. ವೃತ್ತಾಕಾರವಾಗಿ ಕೆತ್ತಲ್ಪಟ್ಟ ಒಂದು ಬದಿಯಲ್ಲಿ ಏಳು ಮನೆ (ಗುಳಿ) ಹಾಗೂ ಇನ್ನೊಂದು ಬದಿಯಲ್ಲಿ ಅಷ್ಟೇ ಗುಳಿಗಳಿರುತ್ತವೆ. ಸಂಗ್ರಹವಾದ ಕಾಯಿಗಳನ್ನು ಶೇಖರಿಸಿಡಲು ಎರಡೂ ಬದಿಯಲ್ಲಿ ಒಂದೊಂದು ದೊಡ್ಡ ಗುಳಿಗಳಿರುತ್ತವೆ.

***ಚೆನ್ನೆ ಕಾಯಿ :*** ಒಂದು ಜಾತಿಯ ಮರದಿಂದ ಸಿಗುವ, ಉದ್ದವಾದ ಕೋಡುಗಳಲ್ಲಿ ಇರುವ ಚಪ್ಪಟೆಯಾದ ಸಣ್ಣ ಸಣ್ಣ ಕೆಂಪು ಕಾಯಿಗಳು

***ಆಡುವ ಕ್ರಮಗಳು :*** ಆಟ ಆರಂಭಕ್ಕೆ ಮುನ್ನ ಪ್ರತಿ ಗುಳಿಯಲ್ಲಿ 4 ಕಾಯಿಗಳನ್ನು ಹಾಕಲಾಗುತ್ತದೆ. (ಕೆಲವು ಆಟಗಳನ್ನು ಬಿಟ್ಟು) ಸಾಮಾನ್ಯವಾಗಿ ಆಡುವಾಗ ಎಡದಿಂದ ಬಲಕ್ಕೆ ಗುಳಿಗೊಂದರಂತೆ ಕಾಯಿಗಳನ್ನು ಹಾಕುತ್ತಾ ಹೋಗಬೇಕು. ಈ ಆಟದಲ್ಲಿ ಅನೇಕ ಆಟಗಳನ್ನು ಆಡಲಾಗುತ್ತದೆ.

***ಹಸುಕರು ಆಟ (ಪೆರ್ಗ ಬುಳೆ ಆಟ) :***

ತುಂಬಾ ಕಾಯಿಗಳು ಒಂದೇ ಗುಳಿಯಲ್ಲಿ ಸಂಗ್ರಹವಾದರೆ ಅದನ್ನು ಹಸು (ಪೆರ್ಗ) ಎಂದು ಹೇಳುವುದು 4 ಕಾಯಿಗಳು ಒಂದು ಗುಳಿಯಲ್ಲಿ ಸಂಗ್ರಹವಾದರೆ ಅದಕ್ಕೆ ಕರು(ಬುಳೆ) ಎಂದು

ಹೇಳುವುದು. 3 ಕಾಯಿಗಳು ತುಂಬಿದರೆ ಅದಕ್ಕೆ ಮುಗುಳಿ ಎಂದು ಹೇಳುವುದು.

***ಆಡುವ ಕ್ರಮ :*** ಎರಡು ಜನ ಆಟಗಾರರು ಚನ್ನೆ ಮಣೆಯ ಎದುರು ಬದುರಾಗಿ ಕುಳಿತುಕೊಳ್ಳುತ್ತಾರೆ. ಯಾರಾದರೊಬ್ಬರು ಮೊದಲು ಆಟ ಪ್ರಾರಂಭಿಸುತ್ತಾರೆ. ತಮಗೆ ಇಷ್ಟ ಬಂದ ಗುಳಿಯಿಂದ ಮಂಜೆಟ್ಟಿ ಕಾಯಿಯನ್ನು ತೆಗೆದು ತನ್ನ ಮಣೆಯ ಬಲ ಭಾಗದ ಗುಳಿಗಳಿಗೆ ಒಂದೊಂದೇ ಹಾಕುತ್ತಾ (ಬಿತ್ತುತ್ತಾ) ಹೋಗಬೇಕು. ಹೀಗೆ ಹಾಕುತ್ತಾ ಹೋಗುವಾಗ ಕೈಯಲ್ಲಿದ್ದ ಕಾಯಿ ಮುಗಿದರೆ ನಂತರದ ಗುಳಿಯಿಂದ ಮಂಜೆಟ್ಟಿ ಕಾಯಿಯನ್ನು ತೆಗೆದುಕೊಂಡು ಆಟ ಮುಂದುವರಿಸಬೇಕು. ಕಾಯಿಯನ್ನು ಹಾಕುತ್ತಾ ಬಂದಾಗ ಮುಂದಿನ ಗುಳಿಗೆ ಹಾಕಲು ಇಲ್ಲದಾಗ ಅಥವಾ ಖಾಲಿಗುಳಿ ಎಂದು ತಿಳಿದಾಗ ಖಾಲಿ ಗುಳಿಯ ಮುಂದಿನ ಗುಳಿಯಲ್ಲಿ ಕಾಯಿಗಳಿದ್ದರೆ ಆ ಎಲ್ಲಾ ಕಾಯಿಗಳು ಆತನಿಗೆ ದೊರೆಯುತ್ತವೆ ಇದಕ್ಕೆ ಹಸು (ಪೆರ್ಗೆ) ಎಂದು ಹೆಸರು. ಆಟಗಾರನು ತನ್ನ ಬದಿಯ ಯಾವುದೇ ಗುಳಿಯಲ್ಲಿ 4 ಕಾಯಿಗಳು ತುಂಬಿದರೆ ಅದನ್ನು ಆತ ತಕ್ಷಣ (ಕೂಡಲೇ)ತೆಗೆದುಕೊಳ್ಳಬೇಕು. ಇದಕ್ಕೆ ಕರು(ಬುಳೆ) ಎಂದು ಹೆಸರು. ಸಾಮಾನ್ಯವಾಗಿ 3 ಅಥವಾ ಅದಕ್ಕಿಂತ ಕಡಿಮೆ ಕಾಯಿಗಳು ಒಂದೊಂದಾಗಿ ಗುಳಿಯಲ್ಲಿದ್ದಾಗ ಆಟ ಮುಂದುವರಿಸಬೇಕಾಗುವುದಿಲ್ಲ. ಆಟವನ್ನು ಕೊನೆಗೊಳಿಸಬಹುದು. ಕಡಿಮೆ ಮಂಜೆಟ್ಟಿ ಕಾಯಿಗಳು ಸಿಕ್ಕಿ ಎಲ್ಲಾ ಗುಳಿಗಳಿಗೆ ಯಾರಿಗೆ ತುಂಬಿಸಲು ಸಾಧ್ಯವಾಗುವು ದಿಲ್ಲವೋ, ಆ ಗುಳಿಗಳಿಗೆ (ಮನೆ) ಬೆಂಕಿ ಬಿದ್ದಿದೆ ಎಂದು ಹೇಳಬಹುದು.

ಈ ಆಟ ಜಾನಪದ ಕೃಷಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಈ ಆಟದಲ್ಲಿ ಬರುವ ಬುಳೆ (ಬೆಳೆ)ಪೆರ್ಗೆ(ದೊಡ್ಡ ಮೊತ್ತ) ಇವೆರಡು ಪದಗಳು ಕೃಷಿಗೆ ಸಂಬಂಧಪಟ್ಟಂತೆ ಬಳಸುವ ಸಾಂಸ್ಕೃತಿಕ ಪದಗಳು. ಕೃಷಿಕನು ಕಾಲ ಕಾಲಕ್ಕೆ ಸರಿಯಾಗಿ ತನ್ನ ಹೊಲದಿಂದ ಒಂದು ನಿರ್ಧರಿತ ಮೊತ್ತದ ಬೆಳೆಯನ್ನು ಪಡೆಯುತ್ತಾನೆ.

ಆಟದ ಸಂದರ್ಭದಲ್ಲಿ ತನ್ನ ಭಾಗದ ಯಾವ ಮನೆಯಲ್ಲಿ 4 ಕಾಯಿಗಳ ಮೊತ್ತ ಉಂಟಾಯಿತೋ ಅದನ್ನು ಪಡೆಯಲು ಆತ ಹಕ್ಕುದಾರನಾಗಿರುತ್ತಾನೆ. ಇದು ಕ್ರಮಬದ್ಧವಾದ ಇಳುವರಿಗೆ ಒಂದು ಸಂಕೇತ. ತನ್ನ ಆಟದ ಚಾಕಚಕ್ಯತೆಯಿಂದ ಕೆಲವೊಮ್ಮೆ ಬಹುಸಂಖ್ಯೆಯಲ್ಲಿ ಕಾಯಿಗಳನ್ನು ಪಡೆಯುತ್ತಾನೆ. ಬೇಸಾಯಗಾರನು ಕೂಡ ತನ್ನ ಶ್ರಮ ಕೌಶಲ್ಯ ಬೆಳೆಯ ರಕ್ಷಣೆಯ ಮೂಲಕ ಸಾಮಾನ್ಯವಾಗಿ ಪಡೆಯುವ ಇಳುವರಿಗಿಂತ ಹೆಚ್ಚು ಇಳುವರಿಯನ್ನು ಪಡೆಯಲು ಸಾಧ್ಯವಾಗುತ್ತದೆಯೆಂಬುದನ್ನು ಸಂಕೇತಿಸುತ್ತದೆ. ಆಟದಲ್ಲಿ ಜಾಣತನ ತೋರಿಸಲಾರದವರು ಮನೆ ತುಂಬಿಸಲು ಸಾಕಷ್ಟು ಕಾಯಿಗಳು ದೊರೆಯದೆ ಖಾಲಿ ಬಿಡುವ ಪರಿಸ್ಥಿತಿ ಬರುತ್ತದೆ. ಅಂತಹ ಮನೆಗಳನ್ನು ಬೆಂಕಿ ಬಿದ್ದ ಮನೆಗಳೆನ್ನುತ್ತಾರೆ. ಹೊಲದಲ್ಲಿ ಸರಿಯಾದ ಇಳುವರಿ ರೈತನಿಗೆ ದೊರೆಯದೆ ಹೋದರೆ ಸಂಸಾರ ನಿಭಾಯಿಸಲು ಕಷ್ಟವಾಗುತ್ತದೆ. ಆರ್ಥಿಕ ದುಸ್ಥಿತಿಯಿಂದ ಮನೆ ಖಾಲಿಯಾಗಿ ಸುಟ್ಟ ಮನೆಯಂತಾಗುವ ಪರಿಸ್ಥಿತಿ ಬರುತ್ತದೆ.

***ಅರಸು ಆಟ :*** ಮೂರು ಜನ ಆಡುವ ಆಟ ಇದಾಗಿದೆ. ಅರಸ ಪ್ರಧಾನಿ ಮತ್ತು ಪೊಡಸು (ಕೆಳ ಮಟ್ಟದ ವ್ಯಕ್ತಿ) ಎಂಬ ಪದನಾಮದೊಂದಿಗೆ ಇವರು ಆಡುತ್ತಾರೆ. ಅರಸ ಆಟಗಾರನ ಬಲ ಭಾಗದಲ್ಲಿ ಪ್ರಧಾನಿಯೂ, ಎಡ ಭಾಗದಲ್ಲಿ ಪೊಡಸು ಆಟಗಾರರು ಇರುತ್ತಾರೆ. ಅರಸು ಆಟಗಾರ ಮಧ್ಯದಲ್ಲಿ 2 ಬದಿಗೂ ಬರುವಂತೆ 6 ಗುಳಿಗಳು ಹಾಗೂ ಉಳಿದ 2 ಜನ ಆಟಗಾರರಿಗೆ 2 ಬದಿಗೂ ಬರುವಂತೆ 4 ಗುಳಿಗಳು ಬರುತ್ತವೆ.

ಮೇಲಿನ ಆಟದಲ್ಲಿ ಬರುವಂತೆ ಈ ಆಟವನ್ನು ಆಡಬಹುದು. ಮೊದಲು ಅರಸ ಆಟ ಪ್ರಾರಂಭಿಸಬೇಕು. ಈ ಆಟದಲ್ಲಿ ಪ್ರತಿ ಸಲ ಆಟ ಮುಗಿದಾಗ ಒಂದೊಂದು ಕಾಯಿಯನ್ನು ಉಳಿದಿಬ್ಬರು ಗೇಣಿ ರೂಪದಲ್ಲಿ ಕೊಡಬೇಕು. ಅರಸು ಆಟ ತುಳು ನಾಡಿನ ಆಡಳಿತ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ.

ಈ ಆಟದಲ್ಲಿ ಬರುವ ಇನ್ನುಳಿದ ಆಟಗಳಾದ ಮೊಕ್ಕೆ ಆಟ, ಕರು ಆಟ, ಸೀತೆ ಆಟ ಹೀಗೆ ಸುಮಾರು 15 ಕ್ಕಿಂತಲೂ ಹೆಚ್ಚಿಗೆ ಪ್ರಕಾರಗಳು ಬರುತ್ತವೆ. ಇವೆಲ್ಲವುಗಳಲ್ಲಿ ನಮ್ಮ ಮಣ್ಣಿನ ಸಂಸ್ಕೃತಿ ಅಡಗಿದೆ. ಕುಟುಂಬದ ಸದಸ್ಯರಲ್ಲದೆ ನೆರೆಕೆರೆಯವರೂ ಒಟ್ಟು ಸೇರಿ ಆಡುವ ಈ ಆಟಗಳು ಸಂತೋಷವನ್ನು ಹೆಚ್ಚಿಸಿ ಪರಸ್ಪರ ಭಾಂದವ್ಯವನ್ನು ಹೆಚ್ಚಿಸುತ್ತವೆ.

***ಲಗೋರಿ :*** ಮನೆಯಂಗಳದಲ್ಲಿ, ಗದ್ದೆ ಬಯಲುಗಳಲ್ಲಿ ಹೆಂಚು ತುಂಡು, ಚಪ್ಪಟೆಕಲ್ಲು ಮೊದಲಾದ ಲಘು ಸಾಧನೆಗಳಲ್ಲಿ ಒಂದರ ಮೇಲೆ ಒಂದನ್ನು ಗೋರಿ ಮಾದರಿಯಲ್ಲಿಟ್ಟು, ಈ ಆಟವನ್ನು ಆಡುವ ಹಿಂದೊಂದು ಕಾಲವಿತ್ತು. ಎರಡು ತಂಡಗಳನ್ನು ಮಾಡಿ ಒಂದು ತಂಡ ಬಿಲ್ಲೆಗೆ ಚೆಂಡೆಸೆಯುವ ಅವಕಾಶವನ್ನು ಪಡೆಯುತ್ತಾರೆ.ಬಿಲ್ಲೆಗೆ ಚೆಂಡೆಸೆದು ಅದು ಬಿದ್ದಾಗ ಕಟ್ಟುವುದು. ಕಟ್ಟಿದರೆ ಒಂದು ಅಂಕ, ಕ್ಯಾಚ್ ಆದಾಗ ಏಳು ಅಂಕಗಳು. ನಂತರ ಬಿಲ್ಲೆಗೆ ಚೆಂಡೆಸೆಯುವ ಅವಕಾಶ ಎದುರು ಅಂದರೆ ಕ್ಯಾಚ್ ಮಾಡಿದ ತಂಡಕ್ಕೆ ಬರುತಿದ್ದು ಹೀಗೆ ಆಟ ಮುಂದುವರಿಯುತ್ತಿತ್ತು. (ಪ್ರಸ್ತುತ ಲಗೋರಿ ಆಟದ ನಿಯಮಗಳ ಪುಸ್ತಕ ರಚನೆಯಾಗಿದೆ)

***ಕುಂಟು ಬಿಲ್ಲೆ (ಜಿಬಿಲಿ, ಜುಬುಲಿ ಆಟ)***

ಸಾಮಾನ್ಯವಾಗಿ 15 ವರ್ಷ ಪ್ರಾಯದವರೆಗೆ ಆಡುವ ಆಟ ಇದಾಗಿದ್ದು ಹೆಚ್ಚಾಗಿ ಹೆಣ್ಣು ಮಕ್ಕಳು ಆಟ ಆಡಲು ಇಷ್ಟ ಪಡುತ್ತಾರೆ. ಹೆಂಚು ತುಂಡು ಗೆರಟೆ ತುಂಡು ಅಥವಾ ಚಪ್ಪಟೆ ಕಲ್ಲುಗಳನ್ನು ತೆಗೆದುಕೊಂಡು ನೆಲದಲ್ಲಿ ಗೆರೆ ಎಳೆದು ಕೋಣೆಗಳನ್ನು ರಚಿಸುತ್ತಾರೆ. ಪ್ರತಿ ಕೋಣೆಗಳಿಗೂ ಪಲ್ಲೆ ಹಾಕುತ್ತಾ ಕೋಣೆಯಿಂದ ಕೋಣೆಗೆ ಟೊಂಕ ಹಾಕುತ್ತಾ ಪಲ್ಲೆಯನ್ನು ಜಾರಿಸಿಕೊಂಡು ಹೊರಗೆ ತರುವುದು. ಆಟವಾಡುವಾಗ ಎಲ್ಲಿ ತಪ್ಪು ಮಾಡುತ್ತಾರೋ 2 ನೇ ಸದರಿಯಲ್ಲಿ ಮೊದಲು ಎಲ್ಲಿ ನಿಲ್ಲಿಸಿದ್ದಾರೋ ಅಲ್ಲಿಂದಲೇ ಆಟವಾಡುವುದು ಈ ಆಟದ ವಿಶೇಷತೆ. ಇದರಲ್ಲಿ ಬರುವ ಹತ್ತು ಆಟಗಳನ್ನು ಆಡುತ್ತಾ ಕೊನೆಯದಾಗಿ ಪಾಯಸ ಅಥವಾ ಮದುವೆ ಆಟಕ್ಕೆ ಒಂದು ಆಟ ಮುಕ್ತಾಯವಾದಂತೆ ಈ ಆಟದಲ್ಲಿ ಬರುವ ತುದಿಯಾಟ, ಕಪ್ಪೆ ಆಟ, ಕಷ್ಟ ಸುಲಭ,

ಮದುವೆ ಮೊದಲಾದ ಪಾರಿಭಾಷಿತ ಪದಗಳನ್ನು ವಿಶ್ಲೇಷಿಸಿದರೆ ವ್ಯಕ್ತಿಯನ್ನು ಸಾಮಾಜಿಕ ಹಾಗೂ ಕೌಟುಂಬಿಕ ಬದುಕಿಗೆ ಸಿದ್ಧಗೊಳಿಸುವ ಅಪೂರ್ವ ಶಕ್ತಿ ಈ ಆಟಕ್ಕಿರುವುದು ಕಂಡು ಬರುತ್ತದೆ.

***ತಲೆಮು ಆಟ :*** ಒಂದುವರೆ ಅಡಿ ಅಥವಾ 2 ಅಡಿ ಉದ್ದದ ಒಂದು ಮರದ ಹಲಗೆ ಅಥವಾ ಏನಾದರೂ ಚಪ್ಪಟೆ ಕಲ್ಲು ಆಗಬಹುದು. ಮರದ ಹಲಗೆಯ ಮುಂದೆ ಒಂದುವರೆ ಮೀಟರ್ ದೂರದಲ್ಲಿ ಒಂದುಗೆರೆ ಎಳೆದು ಈ ಆಟ ಆರಂಭಿಸಬೇಕು. ಈ ಆಟದಲ್ಲಿ ಪೀಲ್ಲನ್ನು ಆಯ್ಕೆ ಮಾಡುವವರು ಮತ್ತು ತಲೆಮು ಮಾಡುವರು. (ಚೆಂಡೆಸಿಯುವವರು) ಎಂದು 2 ಗುಂಪು ಗಳಿರುತ್ತವೆ. ಈ ಆಟದಲ್ಲಿ ತಲೆಮು, ಒತ್ತಕ್ಕೆ 2ಕ್ಕೆ ಆಟ ಆಟ, (ಎರಟೆ) ಕೈ ಕಟ್ಟಿ (ಅಂಡಿಕ್ಕೆ ಆಟ) ತೊಡೆ ಪಟ್ಟು, ಅಡಿಪಟ್ಟು, ಸಕ್ಕರೆ ಆಟ ಡಿಬ್ಬು ಮೊದಲಾದ ಆಟಗಳು ಬರುತ್ತವೆ.

***ಕಲ್ಲಾಟ :*** ಸಾಮಾನ್ಯವಾಗಿ ಬಿಡುವಿನ ವೇಳೆಯಲ್ಲಿ ಹೆಣ್ಣು ಮಕ್ಕಳು ಎಲ್ಲೆಂದರಲ್ಲೂ ಆಡುವ ಆಟವೇ ಕಲ್ಲಾಟ. 5 ಕಲ್ಲುಗಳನ್ನು ತೆಗೆದುಕೊಂಡು ನೆಲಕ್ಕೆ ಹಾಕಿ ಅದರಲ್ಲಿ ಯಾವುದಾದರೂ ಒಂದು ಕಲ್ಲನ್ನು ಹೆಕ್ಕಿ ತೆಗೆದು ಬೆರಳುಗಳಿಂದ ಮೇಲಕ್ಕೆ ಹಾರಿಸಿ ನೆಲದಿಂದ ಒಂದೊಂದೆ ಕಲ್ಲುಗಳನ್ನು ಹೆಕ್ಕಿ ತೆಗೆಯುವುದು. ಹಾಗೆ ತೆಗೆಯುವಾಗ ನೆಲದಲ್ಲಿದ್ದ ಇತರ ಕಲ್ಲುಗಳು ಅಲುಗಾಡಬಾರದು. ಹೆಕ್ಕಿ ತೆಗೆಯುವಾಗ ಕೂಡ ಜಾರಿ ಕೆಳಗೆ ಬೀಳಬಾರದು. ಹಾಗೇ ಬಿದ್ದಾಗ ಔಟಾಗುತ್ತಾರೆ. ಕಲ್ಲಾಟದಲ್ಲಿ 8 ಆಟಗಳಿವೆ. ಈ ಆಟದಲ್ಲಿ ಕೊತ್ತ ಕೊದಲೆ, ಉಯ್ಯಾಲೆ, ಬಿಡುಬಿಡು, ಮೊದಲಾದ ಪಾರಿಭಾಷಿಕ ಶಬ್ಧಗಳಲ್ಲಿ ಉಪಯೋಗಿಸಿ ಈ ಆಟಗಳನ್ನು ಆಡುತ್ತಾರೆ.

***ಮರಕೋತಿ :*** ಅಪ್ಪಟ ಜಾನಪದ ಆಟಗಳಲ್ಲಿ ಒಂದಾದ ಕೋತಿಯ ಅನುಕರಣೀಯ ಮಾದರಿಯ, ಹೆಚ್ಚಾಗಿ ದನ ಕಾಯುವ ಹುಡುಗರು ಆಡುತ್ತಿದ್ದ ಆಟವೇ ಮರಕೋತಿ. ಸಾಮಾನ್ಯವಾಗಿ 3ಅಡಿ ಉದ್ದದ ಕೋಲು ತೆಗೆದುಕೊಂಡು ಅದನ್ನು ಒಂದು ಗೊತ್ತಾದ ಸ್ಥಳದಲ್ಲಿ ಹಾಕುತ್ತಾರೆ. ಆಯ್ಕೆಯಾದವನು ಕೋಲು ಕಾಯುವ ಸರದಿ ಮಾಡುತ್ತಾನೆ. ಎಲ್ಲರೂ ಮರ ಹತ್ತಿ ಗೆಲ್ಲು ಗೆಲ್ಲುಗಳಲ್ಲಿ ಕುಳಿತುಕೊಳ್ಳುತ್ತಾರೆ ಮತ್ತು ಕೋಲು ಕಾಯುವವನ ಕಣ್ಣು ತಪ್ಪಿಸಿ ಆ ಕೋಲನ್ನು ತೆಗೆದುಕೊಂಡು ಒಂದು ಕಾಲನ್ನು ಮೇಲಕ್ಕೆತ್ತಿ ಆ ಕಾಲ ಸಂಧಿಯಿಂದ ದೂರಕ್ಕೆ ಎಸೆಯುತ್ತಾರೆ. ಎಲ್ಲಿಯಾದರೂ ಅವರು ಮರ ಹತ್ತುವ ಮೊದಲೆ ಮುಟ್ಟಿದರೆ ಕೋಲು ಕಾಯುವ ಸರದಿ ಅವರದಾಗುತ್ತದೆ. ಆಗ ಆತ ಸೋತಂತೆ ಮರ ಹತ್ತುವ ಹಾಗೂ ಇಳಿಯುವ ಚಾಕಚಕ್ಯತೆ, ಕೌಶಲ್ಯ ಹಾಗೂ ಆತನ ಬುದ್ಧಿವಂತಿಕೆಗಳಿಗೆ ಸಂವಾದಿಯಾದ ಆಟ ಇದಾಗಿದ್ದು ಆನಂದವನ್ನು ಕೊಡುವ ಆಟವೂ ಹೌದು.

***ಕಣ್ಣಾ ಮುಚ್ಚಾರೆ ಆಟ :***

*"ಕಣ್ಣಾ ಮುಚ್ಚೇ ಗಾಡೇ ಗೂಡೆ*
*ಉದ್ದಿನ ಮೂಟೆ ಉರುಳೇ ಹೋಯಿತು*
*ನನ್ನಯ ಹಕ್ಕಿ ಬಿಟ್ಟೆ ಬಿಟ್ಟೆ*
*ನಿಮ್ಮಯ ಹಕ್ಕಿ ಅಡಗಿಸಿಕೊಳ್ಳಿ"*

ಎಂದು ಹಿರಿಯರು ಹಾಡು ಹೇಳುತ್ತಾ ಒಬ್ಬನ ಕಣ್ಣನ್ನು ಮುಚ್ಚುತ್ತಾರೆ. ಅಷ್ಟರೊಳಗೆ ಇತರರು ತಮಗೆ ಇಷ್ಟ ಬಂದಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಆತ ಹುಡುಕುತ್ತಾ ಹೋಗಿ ಪ್ರತಿಯೊಬ್ಬರನ್ನು ಮುಟ್ಟಲು ಪ್ರಯತ್ನಿಸುವುದು, ಆತನನ್ನು ಏಮಾರಿಸಿ ಕಣ್ಣು ಮುಚ್ಚಿದ ವ್ಯಕ್ತಿಯನ್ನು ಇವರೆಲ್ಲ ಬಂದು ಮುಟ್ಟಿ, ಎಳೆ ಮಕ್ಕಳು ಸಂತೋಷಪಡುವ ಆಟವೇ ಕಣ್ಣಾ ಮುಚ್ಚಾಲೆ.

***ಪಳ್ಳಿ (ಪಲ್ಲಿ) ಆಟ :*** ಒಬ್ಬರ ಕೈಯನ್ನು ಒಬ್ಬರು ಹೆಣೆದು ಕೊಳ್ಳುವವರು ಎರಡು ಜನರಾದರೆ, ಅವರ ಕೈಯನ್ನು ಬಿಡಿಸಲು ಬರುವ ಹಲವಾರು ಜನ ಆಡುವ ಆಟವೇ ಪಲ್ಲಿ ಆಟ. ಶಕ್ತಿ ಹಾಗೂ ಯುಕ್ತಿಗೆ ಹೆಸರು ವಾಸಿಯಾದ ಆಟ ಇದು. ಬಿಡಿಸಲು ಹತ್ತಿರ ಬಂದಾಗ ಅವರ ಬೆನ್ನಿಗೆ ಇಬ್ಬರೂ ಗುದ್ದುವರು. ಏಟನ್ನೂ ಲೆಕ್ಕಿಸದೆ ಹೆಣೆದುಕೊಂಡ ಅವರ ಕೈಯನ್ನು ಬಿಡಿಸುವ ಅತೀ ಸಾಹಸ ಪ್ರದರ್ಶಿಸುವ ಆಟ ಇದಾಗಿದೆ. ಈ ಆಟದಲ್ಲಿ ದೇಹದ ಸೂಕ್ಷ್ಮ ಭಾಗಗಳಿಗೆ ಗುದ್ದಬಾರದು ಎಂಬ ನಿಯಮ ಕೂಡ ಇದೆ.

***ಕಂಬಳ :*** ಮುಂದುಗಡೆ ಕೊಂಬು, ಕಹಳೆ, ವಾದ್ಯ, ಓಮ್ಮೇಳ, ಡೋಲು ಬಾರಿಸುವವರ ಗುಂಪು, ಕದನಿ ಗರ್ನಾಲುಗಳ ಶಬ್ಧ, ಕೋಣಗಳ ಅಕ್ಕ ಪಕ್ಕದಲ್ಲಿ ಎರಡೆರಡು ಜನ ದುಡಿ ಹಗ್ಗ ಹಿಡಿದು ಕೈಯಲ್ಲಿ ಕೋಲು ಹಿಡಿದು ನಡೆಯುವರು. ಹಿಂದುಗಡೆ ತಲೆಗೆ ರುಮಾಲು ಸುತ್ತಿ ಕೈಗೆ ಚಿನ್ನದ ಕಡಗ, ಕುತ್ತಿಗೆಗೆ ಚಿನ್ನದ ಹಾರ ಹಾಕಿದ ಕೋಣಗಳ ಯಜಮಾನ ಆ ಗತ್ತು ಗಮ್ಮತ್ತು ಈಗಿಲ್ಲ. ಕೋಣ ಕಂಬಳದಲ್ಲಿ ಒತ್ತೆಕರೆ ಕಂಬಳ, ಜೋಡುಕರೆ ಕಂಬಳ, ಕನೆ ಹಲಗೆ ಮೊದಲಾದ ವಿಧಗಳಿಂದ ಕಂಬಳ ನಡೆಯುತ್ತದೆ. ಕಂಬಳದ ನಂತರ ಇಂದಿಗೂ ಕೋಳಿ ಅಂಕಗಳೂ ಕೂಡ ನಡೆಯುತ್ತವೆ. ಸಂಪ್ರದಾಯ ಬದ್ಧವಾಗಿ ನಡೆಯುವ ಕಂಬಳವು ಮರೆಯಾಗುತ್ತಿರುವ ಈ ಕಾಲಗಟ್ಟದಲ್ಲಿ ಸುಳ್ಯದ ನಾರ್ಕೋಡು ಸಮೀಪದ ನಮ್ಮ ಗೌಡ ಜನಾಂಗದ ಕಲ್ಲೆಂಬಿ ಮನೆತನದಲ್ಲಿ ಇಂದಿಗೂ ಸಂಭ್ರಮದಿಂದ ಆಚರಿಸಲ್ಪಡುತ್ತಿದೆ.

ಜಾನಪದ ಆಟಗಳ ಮುಖ್ಯಲಕ್ಷಣವೆಂದರೆ ಅವುಗಳ ಅಭ್ಯಾಸ ಪ್ರಯೋಗಗಳಿಗೆ ಹಣ ಖರ್ಚಾಗುವುದಿಲ್ಲ. ಸುತ್ತಮುತ್ತಲಿನ ಪರಿಸರದಲ್ಲಿ ಸಿಗುವ ಸಾಮಾಗ್ರಿಗಳೇ ಸಾಕಾಗುತ್ತವೆ. ಆದುದರಿಂದ ಆಧುನಿಕ ಆಟಗಳಿಗಿಂತ ಭಿನ್ನವಾಗಿದೆ ಎಂದು ಹೇಳಬಹುದು. ಇಂದಿನ ಟಿ. ವಿ. ಧಾರವಾಹಿಗಳಿಂದಲೂ, ಕೊತ್ತಳಿಗೆ ಬ್ಯಾಟ್ ಮಾಡಿ ಎಲ್ಲೆಂದರಲ್ಲಿ ಆಡುವ ಕ್ರಿಕೆಟ್ ಆಟದಿಂದಲೂ ನಮ್ಮ ಸಂಸ್ಕೃತಿಯ ಜಾನಪದ ಆಟಗಳು ಮರೆಯಾಗುತ್ತಿರುವುದು ವಿಷಾದನೀಯ.

-ದೊಡ್ಡಣ್ಣ ಬರೆಮೇಲು, ದೈಹಿಕ ಶಿಕ್ಷಣ ಶಿಕ್ಷಕರು,ಪೆರಾಜೆ.

---

J ಡ್ಜ್‌ನಿಂದ ಮನುಜರ ಸ್ವಭಾವವನ್ನು ತಿಳಿಯಬೇಕು

---

## "ಆಟದಿಂದ ಸಂಘಟನೆ" ಸಾರವ ಸಾರಿದ "ದಂಬೆಕೋಡಿ ಕಪ್ -2003"

## 136 ರಲ್ಲಿ ಸರ್ವಶ್ರೇಷ್ಠ ಪ್ರದರ್ಶನ ನೀಡಿದ ಬಾಳೇಡಿ ತಂಡ ನಂಬರ್ ಒನ್

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಆಶ್ರಯದಲ್ಲಿ ಮೇ 11 ರಿಂದ 21 ರವರೆಗೆ 'ದಂಬೆಕೋಡಿ ಕಪ್" ಕ್ರಿಕೆಟ್‌ಪಂದ್ಯಾವಳಿ, ಗೌಡ ಕುಟುಂಬ ತಂಡಗಳ ನಡುವೆ ನಡೆದು, ಸಹಸ್ರಾರು ಕ್ರೀಡಾಪ್ರೇಮಿಗಳನ್ನು ಜನಾಂಗ ಪ್ರೇಮಿಗಳನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಒಂದೆಡೆ ಕಲೆಯುವಂತೆ ಮಾಡುವಲ್ಲಿ ಯಶಸ್ವಿಯಾಯಿತು. 136 ಕುಟುಂಬ ತಂಡಗಳು ಭಾಗವಹಿಸಿದ್ದ, ಈ ಪಂದ್ಯಾವಳಿಯಲ್ಲಿ ಸೆಮಿ ಫೈನಲ್ ಹಂತವನ್ನು ಬಾಳಾಡಿ, ಪೋರೆಕುಂಜಿಲನ, ಕೂಡಕಂಡಿ ಮತ್ತು ತೆಕ್ಕಡೆ ತಂಡಗಳು ಪ್ರವೇಶಿಸಿದವು. ಫೈನಲ್‌ನಲ್ಲಿ, ಬಾಳಾಡಿ ಮತ್ತು ಪೋರೆ ಕುಂಜಿಲನ ತಂಡಗಳು ಸೆಣಸಿದವು. 12 ಒವರ್‌ಗಳ ಫೈನಲ್ ಪಂದ್ಯದಲ್ಲಿ ಬಾಳಾಡಿ ತಂಡವು ಮೊದಲು ಬ್ಯಾಟ್ ಮಾಡಿ 67 ರನ್‌ಗಳನ್ನು ಕೂಡಿ ಹಾಕಿತು. ಪೋರೆಕುಂಜಿಲನ ತಂಡವು ನಿಗದಿತ ಒವರ್‌ನಲ್ಲಿ ಕೇವಲ 37 ರನ್‌ಗಳನ್ನಷ್ಟೇ ಕೂಡಿಸಲು ಶಕ್ತವಾಯಿತು. ಇದರಿಂದ ಚಾಂಪಿಯನ್ ಬಾಳೆಡಿ ತಂಡವು ಮತ್ತೆ ತನ್ನ ಚಾಂಪಿಯನ್ ಶಿಪ್ಪನ್ನು ಮುಂದುವರಿಸಿತು. ಇದುವರೆಗೆ ತಾನಾಡಿದ 64 ಪಂದ್ಯಗಳಲ್ಲಿ ಅಜೇಯರಾಗಿ ಉಳಿದ ಬಾಳೆಡಿ ಕ್ರಿಕೆಟ್ ತಂಡವು ಸೋಲಿಲ್ಲದ ಸರದಾರ ಎಂಬ ಖ್ಯಾತಿಯೊಡನೆ ಜಿಲ್ಲಾ ಕ್ರೀಡಾಂಗಣದಲ್ಲಿ ತನ್ನ ವಿಜಯೋತ್ಸವ ಆಚರಿಸಿ ಕೊಂಡಿತು. ಮೂರು ಮತ್ತು ನಾಲ್ಕನೇ ಸ್ಥಾನಕ್ಕಾಗಿ ನಡೆದ ಮತ್ತೊಂದು ಪಂದ್ಯದಲ್ಲಿ ಕೂಡಕಂಡಿ ತಂಡವು ತೆಕ್ಕಡೆ ತಂಡವನ್ನು ಸೋಲಿಸಿತು.

ಪ್ರತಿಷ್ಠಿತ ದಂಬೆಕೋಡಿ ಕಪ್ಪನ್ನು ಬಾಳೆಡಿ ತಂಡವು ಪಡೆದರೆ, ರನ್ನರ್ ಅಪ್ ಪ್ರಶಸ್ತಿಯನ್ನು ಪೋರೆಕುಂಜಿಲನ ತಂಡ, ಮೂರನೇ ಬಹುಮಾನವನ್ನು ಕೂಡಕಂಡಿ ತಂಡ, ನಾಲ್ಕನೇ ಸ್ಥಾನವನ್ನು ತೆಕ್ಕಡೆ ತಂಡಗಳು ಪಡೆದು ಕೊಂಡವು. ಬಾಲಾಡಿ ಚಿನ್ನರವರು ಸರಣಿ ಪಂದ್ಯ ಪುರುಷ ಪ್ರಶಸ್ತಿಯನ್ನು, ತೆಕ್ಕಡೆ ಹರೀಶ್ ಉತ್ತಮ ಬ್ಯಾಟ್ಸ್‌ಮನ್ ಪ್ರಶಸ್ತಿಯನ್ನು, ಬಾಲಾಡಿ ಮಧು ಉತ್ತಮ ಬೌಲರ್ ಪ್ರಶಸ್ತಿಯನ್ನು ಮತ್ತು ಪೋರೆಕುಂಜಿಲನ ಪ್ರಶಾಂತ್‌ರವರು ಉತ್ತಮ ಕ್ಷೇತ್ರ ರಕ್ಷಕ ಪ್ರಶಸ್ತಿಯನ್ನು ಪಡೆದುಕೊಂಡರು.

***ವರ್ಣರಂಜಿತ ಉದ್ಘಾಟನೆ, ಜನ ಮನಕ್ಕೆ ಮುದ ನೀಡಿದ ಪಂದ್ಯಾವಳಿ :*** ಮೇ 11 ರಂದು ಪ್ರತಿಷ್ಠಿತ ದಂಬೆಕೋಡಿ ಕಪ್ ಕ್ರಿಕೆಟ್ ಪಂದ್ಯಾವಳಿ ವರ್ಣರಂಜಿತವಾಗಿ ಉದ್ಘಾಟನೆಗೊಂಡಿತು. ದಂಬೆಕೋಡಿ ಕುಟುಂಬದ ಹಿರಿಯರಾದ ದಂಬೆಕೋಡಿ ತಮ್ಮಯ್ಯನವರು ಜ್ಯೋತಿ ಬೆಳಗಿಸುವ ಮೂಲಕ ಪಂದ್ಯಾವಳಿಗೆ ಚಾಲನೆ ನೀಡಿದರು. ಬಳಿಕ ಜಿಲ್ಲಾ ಕ್ರೀಡಾಂಗಣದಲ್ಲಿ ನೆರೆದಿದ್ದ ಸುಮಾರು 60 ಕುಟುಂಬ ತಂಡಗಳು, ಸಮವಸ್ತ್ರ ಧರಿಸಿ, ತಮ್ಮದೇ ಕುಟುಂಬಗಳ ಧ್ವಜ, ಗೌಡ ಸಂಕೇತ, ಗೌಡ ಲಾಂಛನಗಳನ್ನು ಪ್ರದರ್ಶಿಸುತ್ತಾ ಶಿಸ್ತು ಬದ್ಧವಾಗಿ ಪಥ ಸಂಚಲನ ನಡೆಸಿದವು. ಕರ್ನಲ್ ಮೊಟ್ರ ಪುರುಷೋತ್ತಮ ನಂಜಪ್ಪರವರು ಗೌರವ ರಕ್ಷೆ ಸ್ವೀಕರಿಸಿದರು. ಬಳಿಕ 7 ಮಹಿಳಾ ತಂಡಗಳು, "ಸುಗ್ಗಿ ಸುವ್ವಾಲೆ ಕುಣಿತ" ಒಂದೇ ಹಾಡಿಗೆ, ತಮ್ಮ ತಮ್ಮ ಹೆಜ್ಜೆ ಹಾಕಿ ಜನಮನ ರಂಜಿಸಿದರು. ನಂತರ ನಡೆದ ಅತಿಥೇಯ ದಂಬೆಕೋಡಿ ಮತ್ತು ಚಾಂಪಿಯನ್ ಬಾಳಾಡಿ ತಂಡಗಳ ನಡುವೆ ನಡೆದ ಪ್ರದರ್ಶನ ಪಂದ್ಯದಲ್ಲಿ ಬಾಳಾಡಿ ತಂಡವು ವಿಜಯ ಸಾಧಿಸಿತು.

ಉದ್ಘಾಟನ ಸಮಾರಂಭದ ಅಧ್ಯಕ್ಷತೆಯನ್ನು ದಂಬೆ ಕೋಡಿ ಸುಕುಮಾರರವರು ವಹಿಸಿದ್ದರು. ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್, ಮಾಜಿ ಶಾಸಕ ದಂಬೆಕೋಡಿ ಮಾದಪ್ಪ ಮೊದಲಾದವರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಇದೇ ಸಂದರ್ಭದಲ್ಲಿ ಹೊದ್ದೆಟಿ ಭವಾನಿ ಶಂಕರ್ ವಿರಚಿತ 'ಸಂತೃಪ್ತಿ' ಗೌಡ ಕವನ ಸಂಕಲನವನ್ನು ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ರವರು ಬಿಡುಗಡೆಗೊಳಿಸಿದರು.

ಸಮಾರೋಪ ಸಮಾರಂಭ : ಮೇ 11 ರಿಂದ 21 ರವರೆಗೆ ಜಿಲ್ಲಾ ಕ್ರೀಡಾಂಗಣದ ಎರಡು ಕ್ರಿಕೆಟ್ ಮೈದಾನಗಳಲ್ಲಿ ಸುಮಾರು 2050 ಮಂದಿ ಕ್ರಿಕೆಟ್ ಪಟುಗಳು ತಮ್ಮ ಪ್ರದರ್ಶನ ನೀಡಿದರು. ಬಾರಿಕೆ ಕುಟುಂಬ ಮತ್ತು ಬಾರನ ಕುಟುಂಬ ತಂಡಗಳಲ್ಲಿ ಮಹಿಳಾ ಕ್ರಿಕೆಟ್ ಪಟುಗಳೂ ತಮ್ಮ ಪ್ರದರ್ಶನ ನೀಡಿದ್ದು ವಿಶೇಷವಾಗಿತ್ತು. ಪಂದ್ಯಾವಳಿಯುದ್ದಕ್ಕೂ ಎರಡು ಗೌಡ ಸಮಾಜಗಳಲ್ಲಿ ಮದುವೆಯ ಕಾರ್ಯಕ್ರಮಗಳು ಇದ್ದುದರಿಂದ ಸಾಕಷ್ಟು ಜನ ಕ್ರಿಕೆಟ್ ಆಟದ ಸವಿಯನ್ನನುಭವಿಸಲು ಸಾಧ್ಯವಾಯಿತು. ಅಲ್ಲದೆ ವಿದ್ಯಾ ಸಂಸ್ಥೆಗಳಿಗೆ ರಜಾಕಾಲವಾದುದರಿಂದಲೂ ಸಾಕಷ್ಟು ಯುವಕ, ಯುವತಿಯರು ಮಕ್ಕಳು ಪ್ರೇಕ್ಷಕರ ಗ್ಯಾಲರಿಯಲ್ಲಿ ತುಂಬಿದ್ದರು.

ಮೇ 21 ರ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ರವರು ವಹಿಸಿದ್ದರು. ಇದೇ ಸಂದರ್ಭದಲ್ಲಿ ಸಾಹಿತಿ ಹೊದ್ದೆಟಿ ಭವಾನಿಶಂಕರ್‌ರವರನ್ನೂ ಸನ್ಮಾನಿಸಲಾಯಿತು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ನೆಹರು ಮೆಮೋರಿಯಲ್ ಕಾಲೇಜಿನ ಪ್ರಾಚಾರ್ಯರಾದ ಕುರುಂಜಿ ಗಂಗಾಧರಗೌಡರು ಸಭೆಯನ್ನುದ್ದೇಶಿಸಿ ಮಾತನಾಡಿದರು. ವೇದಿಕೆಯಲ್ಲಿ ಮಾಜಿ ಶಾಸಕ ದಂಬೆಕೋಡಿ ಮಾದಪ್ಪ, ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ ಸೇರಿದಂತೆ ದಂಬೆಕೋಡಿ ಕುಟುಂಬಸ್ಥರು ಹಾಜರಿದ್ದು ಬಹುಮಾನ ವಿತರಣೆ ಮಾಡಿದರು.

-ಪಟ್ಟಡ ಶಿವಕುಮಾರ್.

K ಡಕು ಮಾಡುವುದಕ್ಕಿಂತ ಹೇಯವಾದ ಕೆಲಸ ಬೇರೊಂದಿಲ್ಲ

# ಪ್ರತಿಷ್ಠಿತ ದಂಬೆಕೋಡಿ ಕ್ರಿಕೆಟ್ ಪ್ರಶಸ್ತಿಗಾಗಿ ಸೆಣಸಲು ಬಂದ 136 ಗೌಡ ಕುಟುಂಬಗಳು

- ಸಂಗಾತಿ

| | | | | |
|---|---|---|---|---|
| ***ಮೊದಲ ಸ್ಥಾನಗಳು :*** | 1.ಬಾಳೆಡಿ, | 2. ಪೋರೆ ಕುಂಜಿಲನ, | 3. ಕೂಡಕಂಡಿ | 4 ತೆಕ್ಕಡೆ |
| ***ಸೆಮಿ ಫೈನಲ್ :*** | ಬಾಳೆಡಿ, | ಕೂಡಕಂಡಿ, | ತೆಕ್ಕಡೆ, | ಪೋರೆ ಕುಂಜಿಲನ |
| ***ಕ್ವಾರ್ಟರ್ ಫೈನಲ್ :*** | ಬಾಳೆಡಿ, | ಪಾಣತ್ತಲೆ, | ಐಯಂಡ್ರ, | ಪೋರೆ ಕುಂಜಿಲನ |
| | ತೆಕ್ಕಡೆ, | ಕೂಡಕಂಡಿ | ಪೇರಿಯನ | ಪೊಕ್ಕುಲಂಡ್ರ |
| ***ಪ್ರೀ ಕ್ವಾರ್ಟರ್ ಫೈನಲ್:*** | ಬೈಮನ | ಮೊಟ್ಟನ | ತೆಕ್ಕಡೆ | ಕಾಳೇಯಂಡ್ರ |
| | ಐಯ್ಯಂಡ್ರ | ಕೊಳಂಬೆ | ಗುಡ್ಡಂಡ್ರ | ಕೂಡಕಂಡಿ |
| | ಪೇರಿಯನ | ಕೊಂಪುಳಿ | ಪಾಕ ಮುಕ್ಕಾಟಿ | ಪೊರೆಕುಂಜಿಲನ |
| | ಪೊಕ್ಕುಲಂಡ್ರ | ದಂಬೆಕೋಡಿ (B), | ಬಾಳೆಡಿ | ಪಾಣತ್ತಲೆ |
| ***ಮೂರನೆ ಸುತ್ತು :*** | ಕೋಚನ | ಕುದುಪಜೆ | ಪೂಜಾರಿರ | ಕೆದಂಬಾಡಿ |
| | ದೊಲ್ಪಾಡಿ | ಕಡ್ಯದ | ಬೈರೂಡ ಹೊಸೂಕ್ಳು | ನೈಯಣಿ |
| | ಗುಡ್ಡಂಡ್ರ | ಪರಿಚನ | ಯಾಲದಾಳು | ಪರ್ಲಕೋಟಿ |
| | ಪೊನ್ನಚನ | ಮಂದ್ರೀರ | ಸೆಟ್ಟಿ ಜನ | ಪಟ್ಟಡ |
| ***2 ನೇ ಮತ್ತು*** | ಕುಟ್ಟನ, | ಕಲ್ಲು ಮುಟ್ಲು, | ಕೊಡಗನ | ಚಂಡೀರ, |
| ***ಮೊದಲನೆ ಸುತ್ತು :*** | ನಾಟೋಳನ, | ಪುದಿನೆರವನ, | ಪಲ್ಲೆತಿ ಮುಕ್ಕಾಟಿ | ಕುದುಕುಳಿ |
| | ದೇವಾಯಿರ | ಮರಗೋಡು ಮುಕ್ಕಾಟಿ, | ಕೈಕೇರಿ ಮುಕ್ಕಾಟಿ, | ಕರ್ಣಯ್ಯನ |
| | ಮರದಾಳು, | ಹುದೇರಿ, | ಕುಂಟಿಕಾನ, | ಕೊಲ್ಯದ |
| | ಸುಳ್ಯ ಕುದುಪಜೆ | ಕೋಳಿಬೈಲು, | ಕಾವೇರಿ ಮನೆ, | ಬೈತಡ್ಕ |
| | ಮಾವಾಜಿ, | ಚೆಟ್ಟಿಮಾಡ,, | ಪೈಕೇರ, | ಮೊಟ್ರ |
| | ಚೆರಿಯಮನೆ, | ಕೆದಂಬಾಡಿ, | ಊರು ಬೈಲು, | ಸೂದನ |
| | ಹುಲಿಮನೆ, | ಚರಕನ, | ಬಾರಿಕೆ, | ಕಾಳೇರಮ್ಮನ (A) |
| | ದಾಯನ, | ಬಾಕಿಲನ, | ಬಳ್ಳಡ್ಕ, | ಪಡ್ಪಂಬೈಲು |
| | ದಂಬೆಕೋಡಿ (A) | ಅಂಬೆಕಲ್ಲು, | ಹೊಸೂರು | ಕಾನಡ್ಕ |
| | ತುಂತಜೆ (B), | ಕೋಳುಮುಡಿಯನ, | ತಳೂರು; | ಪಾರೆಮಜಲು |
| | ಅಂಬ್ರಾಟಿ, | ನೂಜಿಬೈಲು, | ಅಚ್ಚಲ್‌ಪ್ಪಾಡಿ, | ನಡುವಟ್ಟೀರ |
| | ಕುಯ್ಯುಮುಡಿ, | ಯಂಕನ, | ತೂಟೇರ, | ಪಾಂಡನ |
| | ಜೈನೀರ , | ಕೋಚೇರ, | ಕುಡೆಕಲ್ಲು, | ಓಡಿಯನ |
| | ಬೋಳನ, | ಕೈಬಿಲಿರ | ಬಿದ್ರುಪಣೆ | ಕುಂಬಗೌಡನ |
| | ಬೆಪ್ಪುರನ | ಬೊಮ್ಮೆಗೌಡನ | ಎಡಿಕೇರಿ | ಪರ್ಚನ |
| | ಬೊಳ್ಳುಮನೆ | ಕೋಳಿಮಾಡು | ತುಂತಜೆ (A) | ಉದಿಯನ |
| | ಮುಕ್ಕಾಟಿ | ಗುಡ್ಡನ | ಮುದ್ಯನ | ಕರಕರನ |
| | ಅಂಚೆಮನೆ | ದೇರಜೆ | ಬಾರನ | ಚದ್ಕಾರು |
| | ಉಳುವಾರನ | ಕಟ್ರತನ | ತೋರೇರ | ಕಾಳೇರಮ್ಮನ (B) |
| | ಕಟ್ಟೆಮನೆ | ಮೇರ್ಕಜೆ | ಕೇಕಡ | ಪೊನ್ನಚನ |
| | ಪಡಿಕ್ಕಲ್ | ಬೆಳಿಯಂಡ್ರ | ಕುಯ್ಯಮುಡಿ, | ಮೂಡಗದ್ದೆ |
| | ಆನೇರ | ಅಮೆಮನೆ | ನಂಗಾರು, | ತೊತ್ತಿಯನ |
| | ಮುಂಡೊಡಿ, | ಮಂದ್ರೀರ | ಕೂರನ | ಚೀಯಪ್ಪನ |
| | ಬಾಡನ, | ಬಿಟ್ಟೀರ | ದೇವಜನ | ಕುಕ್ಕೇರ |
| | ತೋಟಂಬೈಲು, | ಕುಂಞಾಳಿ | ಕುಕ್ಕುನೂರು | ಪೊಡನೋಳನ |
| | ಕಾಂಗೀರ | ದಂಡಿನ | ಕೋರನ | ಕೋಚನ |

L ಹೋದರೂ ವಿನಯದಿಂದ ವರ್ತಿಸಬೇಕು

# ದಂಬೆಕೋಡಿ ಕ್ರಿಕೆಟ್ ಕಪ್ - ಅನಿಸಿಕೆಗಳು

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಸಂಪಾದಕರಿಗೆ ನಾನು ಬರೆದು ಮಾಡುವ ನಮಸ್ಕಾರಗಳು. ಸಂಪಾದಕರೇ ನನಗೆ ವಿಷಯವನ್ನು ಹೇಗೆ ಶುರು ಮಾಡುವುದೋ ತಿಳಿಯದು ಯಾಕೆಂದರೆ ನಮ್ಮ ಗೌಡ ಜನಾಂಗದವರು ಯಾಕೆ ಹೀಗಾಗಿದ್ದಾರೆ ಎಂಬುದೆ ನನಗೆ ತಿಳಿಯುತ್ತಿಲ್ಲ. ನಮ್ಮಲ್ಲಿ ಒಗ್ಗಟ್ಟು ಇಲ್ಲ ಎಂಬುದನ್ನು ನಾವು ಮತ್ತೆ ಮತ್ತೆ ಸಾಬಿತು ಪಡಿಸುತ್ತಿದ್ದೇವೆ.ನಾನು ಹೀಗೇಕೆ ಹೇಳುತ್ತಿದ್ದೇವೆ. ಅಂದರೆ ನಾನು ನಿನ್ನೆಯಷ್ಟೆ ಮುಗಿದ ದಂಬೆಕೋಡಿ ಕ್ರಿಕೆಟ್ ಕಪ್ 2003ನ ಪಂದ್ಯ ನೋಡಲು ಹೋಗಿದ್ದೆ ಅಲ್ಲಿ ನನಗೆ ತುಂಬಾ ನಿರಾಸೆಯಾಯಿತು. ನಾನು ತುಂಬಾ ಜನರು ಬರಬಹುದೆಂದು ನಂಬಿದ್ದೆ. ಆದರೆ ಅಲ್ಲಿ ನೆರೆದಿದ್ದ ಜನರ ಸಂಖ್ಯೆಯನ್ನು ನೋಡಿ ನನಗೆ ತುಂಬಾ ಬೇಸರವಾಯಿತು. ಇಷ್ಟೊಂದು ದೊಡ್ಡ ಜನಸಂಖ್ಯೆಯಿರುವ ನಾವು ಜನಾಂಗದ ಒಗ್ಗಟ್ಟಿಗಾಗಿ ನಡೆಸುವ ಕ್ರಿಕೆಟ್ ಪಂದ್ಯಾವಳಿಯನ್ನು ನೋಡಲು ಬರುವ ಜನರ ಸಂಖ್ಯೆ ಬರಿ 1000 ಇದು ನಮ್ಮ ಜನಾಂಗಕ್ಕೆ ನಾಚಿಕೆಗೇಡಿನ ವಿಷಯ. ನಾವು ಬೇರೆ ವಿಷಯದಲ್ಲೆಲ್ಲ ಬೇರೆಯವರಿಗೆ ಸಡ್ಡು ಹೊಡೆದು ನಿಲ್ಲುತ್ತೇವೆ. ಆದರೆ ಒಂದಾಗುವ, ಒಗ್ಗಟ್ಟಾಗುವ ವಿಷಯದಲ್ಲಿ ಮಾತ್ರ ನಾವೆಕೆ ಇಷ್ಟೊಂದು ಹಿಂದೆ ಎಂಬುದು ನನಗೆ ಅರ್ಥವಾಗುತ್ತಿಲ್ಲ. ಆದ್ದರಿಂದ ನಮ್ಮ ಜನಾಂಗದವರಲ್ಲಿ ನನ್ನದೊಂದು ವಿನಂತಿ. ದಯವಿಟ್ಟು ನಾವು ಮುಂದೆ ಬಂದು ನಮ್ಮ ಜನಾಂಗದ ಏಳಿಗೆಗಾಗಿ ದುಡಿಯೋಣಾ. ಈ ವಿಷಯದಲ್ಲಿ ನಾನು ಕೆಲವೊಂದು ಸಲಹೆಗಳನ್ನು ಕೊಡೊದಕ್ಕೆ ಇಷ್ಟ ಪಡುತೇನೆ. ಅದೇನೆಂದರೆ ಮೊದಲನೆಯದಾಗಿ ನಾವು ಜನಾಂಗದವರೆಲ್ಲಾ ಒಂದಾಗಿ ವರ್ಷಕ್ಕೆ ಒಂದೇ ಒಂದು ಪಂದ್ಯಾವಳಿಯನ್ನು ಆಯೋಜಿಸಬೇಕು.ನಂತರ ಯಾವ ಕುಟುಂಬದವರು ಪಂದ್ಯಾವಳಿಯನ್ನು ಆಯೋಜಿಸಿರುತ್ತಾರೋ ಅವರು ಹೆಚ್ಚು ಹೆಚ್ಚಾಗಿ ಎಲ್ಲಾ ಪಂದ್ಯಗಳನ್ನು ವೀಕ್ಷಿಸಲು ಹಾಗೂ ಕ್ರೀಡಾ ಪಟುಗಳನ್ನು ಪ್ರೋತ್ಸಾಹಿಸಲು ಬರಬೇಕು. ಮತ್ತೆ ಯಾವ ತಂಡ ಆಟವಾಡುತ್ತದೋ ಆ ತಂಡದವರು ತಮ್ಮ ಮನೆಯ ವರನ್ನು, ಬಂದುಗಳನ್ನು ನೆಂಟರಿಷ್ಟರನ್ನು ಒತ್ತಾಯ ಮಾಡಿ ಆದರು ಹೆಚ್ಚಿನ ಸಂಖ್ಯೆಯಲ್ಲಿ ಕರೆದುಕೊಂಡು ಬರಬೇಕು. ಜೊತೆಗೆ ನನ್ನದೊಂದು ಇನ್ನೊಂದು ಸಲಹೆ ಏನೆಂದರೆ ನೀವು ಅಂದರೆ ಗೌಡ ಜನಾಂಗದವರು ಕ್ರಿಕೆಟ್ ಪಂದ್ಯದ ಬದಲು ವಾಲಿಬಾಲ್ ಅಥವಾ ಬೇರೆ ಯಾವುದಾದರೂ ಪಂದ್ಯಗಳನ್ನು ಆಯೋಜಿಸುವುದು ಒಳ್ಳೆಯದು. ಏಕೆಂದರೆ ಕ್ರಿಕೆಟ್ ಪಂದ್ಯವನ್ನು ಟಿ. ವಿ. ಯಲ್ಲಿ ನೋಡುವುದೆ ಕಷ್ಟ. ಅದರಲ್ಲಿ ಪ್ರತ್ಯೇಕ್ಷವಾಗಿ ನೋಡುವುದು ತುಂಬಾನೆ ಕಷ್ಟ. ಜೊತೆಗೆ ಹುಡುಗಿಯರಿಗೂ ಪಂದ್ಯಗಳನ್ನು ಆಯೋಜಿಸಬೇಕು. ನನ್ನ ಪ್ರಕಾರದಲ್ಲಿ ಇವಿಷ್ಟನ್ನು ಅನುಸರಿಸು ವುದರಿಂದ ನಾವು ಜನಾಂಗದವರ ಕುತೂಹಲವನ್ನು ಕೆರಳಿಸಬಹುದು.

ಇಷ್ಟು ನನ್ನ ದೂರು ಹಾಗೂ ಸಲಹೆಗಳಾದರೆ ಈಗ ನಾನು ಬರೆಯಲು ಇಚ್ಛಿಸುತ್ತಿರುವುದು ನಮ್ಮ ಜನಾಂಗದಲ್ಲಿರುವ ಪ್ರತಿಭೆಗಳ ಬಗ್ಗೆ ನಮ್ಮ ಜನಾಂಗದಲ್ಲಿ ಬೇಕಾದಷ್ಟು ಪ್ರತಿಭೆಗಳಿವೆ. ಆ ಪಟ್ಟಿಗೆ ಮೂರು ಜನ ಯಾರೆಂದರೆ ಪಟ್ಟಡ ಶಿವಕುಮಾರ್,ಕೊಳಂಬೆ ಪ್ರದೀಪ್ ಮತ್ತು ಕಟ್ಟೆಮನೆ ಸೋನು. ಈ ತ್ರಿಮೂರ್ತಿಗಳ ಕಾಮೆಂಟ್ರಿ ಚೆನ್ನಾಗಿತ್ತು. ಅವರಲ್ಲಿ ಪಟ್ಟಡ ಶಿವಕುಮಾರ್ ಸರ್ ಮತ್ತು ಕೊಳಂಬೆ ಪ್ರದೀಪ್‌ರವರ ಕಾಮೆಂಟ್ರಿ ಶುದ್ಧ ಅರೆಭಾಷೆಯಲ್ಲೆ ಇದ್ದುದ್ದನ್ನು ಕೇಳಲು ತುಂಬಾ ಮುದನೀಡುತ್ತಿತ್ತು. ಆದರೆ ಕಟ್ಟೆಮನೆ ಸೋನುರವರ ಕಾಮೆಂಟ್ರಿ ಮಾತ್ರ ಸ್ವಲ್ಪ ಬೇಸರವನ್ನುಂಟು ಮಾಡುತ್ತಿತ್ತು. ಏಕೆಂದರೆ ಅವರು ಅಚ್ಚ ಅರೆಭಾಷೆಯ ನಡುವೆ ತುಂಬಾ ಇಂಗ್ಲೀಷ್ ಪದಗಳನ್ನು ಉಪಯೋಗಿಸುತ್ತಿದ್ದರು. ಅದನ್ನು ಕೇಳಲು ಹಿತವಾಗಿರಲಿಲ್ಲ. ಮತ್ತು ಅದರಿಂದ ಎಲ್ಲರಿಗೂ ತಿಳಿಯುತ್ತಿತ್ತು ಅವರಿಗೆ ಇಂಗ್ಲೀಷ್ ಪ್ರೇಮ ಎಷ್ಟು ಇದೆ ಎಂಬುದು.

ಶ್ರೀ ಕಾವೇರಿ ಮಾತೆ ಹಾಗೂ ತಿರುಪತಿ ವೆಂಕರಮಣ ನಮ್ಮ ಗೌಡಜನಾಂಗದವರನ್ನು ಆಶೀರ್ವದಿಸಲಿ ಎಂದು ಆಶಿಸುತ್ತ ನನ್ನ ಪತ್ರವನ್ನು ಇಲ್ಲಿಗೆ ಮುಗಿಸುತ್ತಿದ್ದೇನೆ.

-ಮುಕ್ಕಾಟಿ ಪೃಥ್ವಿ ಮಾದಪ್ಪ, ಬೇತುಗ್ರಾಮ, ನಾಪೋಕ್ಲು

## ಪತ್ರ ವಿಭಾಗ - ಅಭಾರಿಗಳು

**ಶ್ರೀಮತಿ ಪಟ್ಟಡ ಶೀಲಾಮಣಿ, ಸಂಪಾದಕಿ, ಕೊಡಗು ಸಂಗಾತಿ, ಮೈಸೂರು.**

ಮಾನ್ಯರೇ,

ಕೊಡಗಿನಲ್ಲಿ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಇತಿಹಾಸ ನಿರ್ಮಿಸಿ ನಮ್ಮಿಂದ ದೂರವಾದ ಪೂಜ್ಯ ಶ್ರೀ ಬಿ. ಎಸ್. ಗೋಪಾಲಕೃಷ್ಣ ಅವರ ಕುರಿತ ಲೇಖನಗಳಿಗೆ ಪ್ರಾಮುಖ್ಯತೆ ನೀಡಿ ಪ್ರಕಟಿಸಿದ್ದೀರಿ.

ಇಡಿಯ ಕುಟುಂಬ ನಿಮಗೆ ಧನ್ಯವಾದಗಳನ್ನು ಸಮರ್ಪಿಸುತ್ತದೆ. ಶ್ರೀಯುತ ಪ್ರಭಾಕರ ಅವರಿಗೆ ನಾವು ಆಭಾರಿಗಳು.

ವಂದನೆಗಳು,

ಜೆ. ಚಿದ್ವಿಲಾಸ್,
ಪ್ರಧಾನ ವ್ಯವಸ್ಥಾಪಕರು, ಶಕ್ತಿ ಪತ್ರಿಕೆ.

## ಪತ್ರ - ವಿಭಾಗ-2 ಸ್ಕ್ಯಾಚು ಹಾಕಲಿಕ್ಕೆ ಆಗಲಿಲ್ಲ.

ಕೊಡಗು ಸಂಗಾತಿ ಸಂಪಾದಕಿ ಪಟ್ಟಡ ಶೀಲಾಮಣಿ ಯವರಿಗೆ ಸೋಮಯ್ಯನ ಅನಂಥ ವಂದನೆ ಗಳೊಂದಿಗೆ ಈ ಮೂಲಕ ನಾನು ತಿಳಿಯಪಡಿಸುವುದೇನೆಂದರೆ ನನಗೆ ನೀವು ಕೊಡಗು ಸಂಗಾತಿ ಪತ್ರಿಕೆಯನ್ನು ಇಲ್ಲಿಯತನಕ ತಪ್ಪದೇ ಕಳುಹಿಸುತ್ತಿರುವಿರಿ. ಆದರೆ ಕೆಲವು ಕಾರಣಗಳಿಂದ ಇನ್ನು ಮುಂದೆ ನನಗೆ ಕಳುಹಿಸಬೇಡಿ. ದಯವಿಟ್ಟು ನಿಲ್ಲಿಸಿ. ನನಗೆ ನಿಮ್ಮ ಸಂಗಾತಿ ಪತ್ರಿಕೆಯು ಏನೂ ಪ್ರಯೋಜನ ಕಾಣುವುದಿಲ್ಲ. ಹಾಗೂ ಏನು ವಿಷಯವೂ ಇರುವುದಿಲ್ಲ. ಕಾರಣ ಗೌಡ ಜನಾಂಗದ ಅರೆಗನ್ನಡ ಭಾಷೆಲಿ ಪ್ರಕಟಿತವೆಂದು ಬಾರಿ ಹೆಗ್ಗಳಿಕೆಯಿಂದ ಜೋರಾಗಿ ಬರೆಯುತ್ತಿರುವಿರಿ. ಆದರೆ ಕಳೆದ ದಿನಾಂಕ ಫೆಬ್ರವರಿ 1ರಿಂದ 28-2003 ರ ಪತ್ರಿಕೆಯಲ್ಲಿ ಮುಖ ಪುಟದಲ್ಲಿ ಪುಟ್ಟ ಜಿಲ್ಲೆಯ ಅಪಾರ ಕೊಡುಗೆ ದೇಶದ ಪ್ರಪ್ರಥಮ ಮಹಾ ದಂಡನಾಯಕ ಫೀಲ್ಡ್ ಮಾರ್ಷಲ್ ಕೊಡಂದೇರ ಮಾದಪ್ಪ ಕಾರ್ಯಪ್ಪನ ಭಾವ ಚಿತ್ರವನ್ನು ನೀಡಿದ್ದೀರಿ ಸರಿ. ಆದರೆ ಫೀಲ್ಡ್ ಮಾರ್ಷಲ್ ಕೊಡಂದೇರ ಕೆ. ಯಂ. ಕಾರ್ಯಪ್ಪ ಆಗಿರಬಹುದು. ಆದರೆ ಅವರ ಪತ್ರಿಕೆಗಳಲ್ಲಿ ನಮ್ಮ ಯಾವುದೇ ಹೆಬ್ಬಾಳಿಕೆಯನ್ನು ಕೊಡುತಿರುವುದು ಇಲ್ಲಿಯ ತನಕ ನಾನು ಕಂಡಿಲ್ಲ. ನನಗೆ ಅಲ್ಲಿ ನಮ್ಮ ಇಲ್ಲಿ ಯಾರಿಗೂ ಇಷ್ಟವಿಲ್ಲದ ವಿಷಯ. ಅವರು

M ತಪ್ಪುಗಳನ್ನು ತಿದ್ದಿ ಕೊಳ್ಳಬೇಕು

ವಿಷಯ. ಅವರು ಕೊಡಗಿನಲ್ಲಿ ಎಷ್ಟು ಕಡೇ ಕಾಣಿಸಿ ಕಾಣುತ್ತಿರುವರು. ಅದು ತಮಗೆಲ್ಲರಿಗೂ ಗೊತ್ತು ಅಲ್ಲವೆ? ಇನ್ನು ಮುಂದಿನ ಪತ್ರಿಕೆಯಲ್ಲಿ ರ್ಯ. ಯು. ನಾಚಪ್ಪನ ಫೋಟೊ ಹಾಗೂ ಅವರು ಮಾಡುತ್ತಿರುವ ಒಳ್ಳೆಯ ಕೆಲಸವನ್ನು ಎತ್ತಿ ಕೊಂಡಾಡಿ ಹಾಕಿ. ಏಕೆಂದರೆ ನಮ್ಮ ಗೌಡ ಜನಾಂಗದಲ್ಲಿ ನಿಮಗೆ ಯಾರು ಸಿಗಲಿಲ್ಲವೇ? ನಮ್ಮ ಜನಾಂಗದ ಗುಡ್ಡೆ ಮನೆ ಅಪ್ಪಯ್ಯ ಗೌಡರನ್ನು ಬ್ರಿಟಿಷರು ಪಾಸಿಗೆ ಏರಿಸಿದ ನಂತರ ಮಡಿಕೇರಿಯಲ್ಲಿ ಒಂದು ಸ್ಟ್ಯಾಚು ಹಾಕಲಿಕ್ಕೆ ಯಾರಿಗೂ ಆಗಲಿಲ್ಲ. ಅದು ಒಂದು ನಮ್ಮ ಜನಾಂಗಕ್ಕೆ ಹೆಬ್ಬಾಳಿಕೆಯ ಹೆಮ್ಮೆಯೇ ಆದುದರಿಂದ ಇನ್ನು ಹೆಚ್ಚಿಗೆ ಬರೆಯಲು ಇಚ್ಛೆ ಕಾಣುವುದಿಲ್ಲ. ನನಗೆ ನಿಮ್ಮ ಕೊಡಗು ಸಂಗಾತಿ ಪತ್ರಿಕೆ ಬೇಕಾಗಿಲ್ಲ. ಕಳುಹಿಸಬೇಡಿ ಹಾಗೂ ಕಳುಹಿಸಿದ್ದಲ್ಲಿ ನಾನು ಹಣ ಕೊಡುವುದಿಲ್ಲ. ಇದು ಅಂತ್ಯ. ತುಂಬಾ ಬೇಸತ್ತು ಬರೆದಿರುತ್ತೇನೆ. ವಂದನೆಗಳು,

-ಸೋಮಯ್ಯ

*ವಿ.ಸೂ.: ಪತ್ರಿಕೆಗೆ ಲೇಖನವನ್ನು ಕಳುಹಿಸುವಾಗ ತಮ್ಮ ಹೆಸರು ಪೂರ್ಣ ವಿಳಾಸ ನೀಡಬೇಕು. ಮೂಗರ್ಜಿ ಬರೆಯೋದು ಸರಿಯಲ್ಲ. ಧೈರ್ಯವಾಗಿ ನಮ್ಮನ್ನು ಪ್ರಶ್ನೆ ಕೇಳಿ, ನಾವ್ ಅದಿಕ್ಕೆಲ್ಲಾ ಖಂಡಿತ ಉತ್ತರಿಸುತ್ತೇವೆ. ಪತ್ರಿಕೆಯನ್ನು ನಡೆಸುತ್ತಿರುವಾಗ ಹಲವಾರು ಕಟ್ಟು ಕಟ್ಟಲೆ ಇದೆ. ಅದನ್ನೆಲ್ಲಾ ಪತ್ರಿಕೆಯಲ್ಲಿ ತಿಳಿಸುವುದು ಸಮಂಜಸವಲ್ಲ. ಪ್ರಶ್ನೆ ಮಾಲೆ ಕಳ್ಸಿ. ತಮ್ಮ ಪೂರ್ಣ ವಿಳಾಸ ನೀಡಿದಲ್ಲಿ ಪರಿಚಯ ಓದುಗರಿಗಾಗುತ್ತದೆ.*

-ಸಂಪಾದಕ

## 24 ನೇ ರಾಷ್ಟ್ರೀಯ ಮಾಸ್ಟರ್ ಅಥ್ಲೇಟಿಕ್ ಚಾಂಪಿಯನ್ ಶಿಪ್‌ನಲ್ಲಿ ಪಿ. ಯಂ.ಆನಂದ್ ಅವರ ಸಾಧನೆ



ಮೇ 10 ಮಣಿಪುರ ವೆಟರನ್ ಅಮೆಚೂರ್ ಅಥ್ಲೆಟಿಕ್ ಅಸೋಸಿಯೇಷನ್ ವತಿಯಿಂದ ಏಪ್ರಿಲ್ 16-19 ರವರೆಗೆ ಇಂಪಾಲ್‌ನಲ್ಲಿ ನಡೆದ 24ನೇ ರಾಷ್ಟ್ರೀಯ ಮಾಸ್ಟರ್ ಅಥ್ಲೆಟಿಕ್ ಚಾಂಪಿಯನ್ ಶಿಪ್ ನಲ್ಲಿ 45 ವರ್ಷದೊಳಗಿನ 800 ಮೀ ಓಟದಲ್ಲಿ ಪಿ. ಯಂ. ಆನಂದ್ ಅವರು ತೃತೀಯ ಸ್ಥಾನಗಳಿಸಿದ್ದಾರೆ. ಇವರು ಮಡಿಕೇರಿ ತಾಲ್ಲೂಕಿನ ಗಾಳಿಬೀಡಿನ ಪೂಜಾರಿರ ದಿವಂಗತ ಮೊಣ್ಣಪ್ಪನವರ ಪುತ್ರರಾಗಿದ್ದು ಮಂಗಳೂರಿನ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಉದ್ಯೋಗಿಯಾಗಿ ಕಾರ್ಯ ನಿರ್ವಹಿ ಸುತ್ತಿದ್ದಾರೆ.

-ಮಳ್ಳಂದೀರ ಕಲಾ ವಾಸುದೇವ, ಹೊಸ್ಕೇರಿ ಗ್ರಾಮ.

## ಮೈಸೂರು ಜಿಲ್ಲೆಯ 51 ಪತ್ರಿಕೆಗಳು 'ಡಿಗ' ಬ್ಲಾಕಿಂಗ್ ಪಟ್ಟಿಗೆ

ಮೈಸೂರು ಜಿಲ್ಲೆಯಿಂದ ಪ್ರಕಟವಾಗುತ್ತಿದ್ದ ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕ, ಮಾಸಿಕ, ತ್ರೈಮಾಸಿಕ ಸೇರಿದಂತೆ ಒಟ್ಟು ೫೧ ಪತ್ರಿಕೆಗಳ ಶೀರ್ಷಿಕೆಗಳನ್ನು ವಿವಿಧ ಕಾರಣಗಳಿಗಾಗಿ ಹೊಸ ದಿಲ್ಲಿಯ ರಿಜಿಸ್ಟ್ರಾರ್ ನ್ಯೂಸ್ ಪೇಪರ್ ಫಾರ್ ಇಂಡಿಯಾ ಇವರು 'ಡಿಗ 'ಬ್ಲಾಕಿಂಗ್ ಮಾಡಿ ಬ್ಲಾಕಿಂಗ್ ಪಟ್ಟಿಗೆ ಸೇರಿಸಿದ್ದಾರೆ. ಆದ್ದರಿಂದ ಪತ್ರಿಕೆಗಳು ಇನ್ನು ಮುಂದೆ ಇದೇ ಹೆಸರಿನಲ್ಲಿ ಪ್ರಕಟಣೆ ಮಾಡುವುದನ್ನು ರದ್ದು ಪಡಿಸಲಾಗಿದೆ.

ಮಹಾಪೌರ, ಜನಸಮರ, ಕ್ಷಮಯಾಧರಿತ್ರಿ, ಕಪಿಲ ಎಕ್ಸ್‌ಪ್ರೆಸ್, ಕರ್ನಾಟಕ ಆರ್ಯ ವೇದಿಕೆ,ನಗರಾಭಿವೃದ್ಧಿ, ನಂಜನಗೂಡು ಮಿತ್ರ, ಮೈಸೂರು ಮುಕುಟ, ವಿಶ್ವಮಾನ್ಯ, ಖಿಲೀಲ್, ಕೋಟೆ ಪ್ರಚಾರ, ಅಂಗನವಾಡಿ ಮೇಡಮ್, ಮೈಸೂರು ಮರ್ಚೆಂಟ್ಸ್ ರಿಪೋರ್ಟ್, ಮೈಸೂರು ನಗರ, ಮಾರ್ಕೆಟ್ ವಾರ್ತೆ, ನಿರುಪಮ ಚಿಂತನ, ಋತುಮಾನ, ಸ್ಟಾರ್ ಮೇಕರ್, ಸಿಜಿಜನ್ಸ್ ಬ್ಯೂಗಲ್, ಮಾಯಾದರ್ಪಣಂ, ಆಪರೇಷನ್ ಕರ್ನಾಟಕ, ಜನರಲ್ ವಾಯ್ಸ್, ಐ ಯಾಮ್ ನಾಟ್ ಗಾಡ್, ಲಕ್ಷ್ಮಣತೀರ್ಥ, ರಣಭೂಮಿ ಡೈರಿ, ಪ್ರಜಾ ಮುನ್ನಡೆ, ಕ್ಯಾಂಪಸ್ ಟೈಮ್ಸ್, ರಾಜ್ಯಪ್ರಭ, ಹಲೋ ಸಿಟಿ, ನೀವು ಅರಿಯದ ನ್ಯೂಸ್, ಆಡ್ಸ್ ಅಂಡ್ ಆಡ್ಸ್, ಪ್ರಜಾಬಿಂಬ, ನೇಷನ್ ಕಾನ್‌ಸ್ಟಿಟ್ಯೂಷನ್ ರಿಪೋರ್ಟ್, ಪ್ರಜಾ ಸ್ಪಂದನ, ಹಿಂದಿನ ರನೆಜಿನ ಅಮ್ಮಯ್ಯ ಕೆ. ನಿಮಗಾಗಿ, ರಾಗಿ ರಾಜ್ಯ, ಸಜ್ಜಿ, ಜನತೆಯ ಸಮಸ್ಯೆ, ಮಲೆಯಾಳಿಯುಡೆ ಕನ್ನಡ ಮಿತ್ರಂ, ಮಂತ್ರ ದಂಡ, ಮಹಿಳಾ ಲೋಕ, ಅವರ್ ಚಾಯ್ಸ್ ಟುಡೇ ರೇಸ್ ಹಾಗೂ ಚಕ್ರವ್ಯೂಹ ಇವುಗಳೇ ರದ್ದು ಪಡಿಸಲಾದ ಪತ್ರಿಕೆಗಳಾಗಿವೆ.

-ಸಂಗಾತಿ

## ಅಲ್ಪಂಗೆ ಐಶ್ವರ್ಯ ಬಂದ್ರೆ ಅರ್ಧ ರಾತ್ರಿಲಿ ಕೊಡೆ ಹಿಡೆದು

ಮುರ್ಖಂಗೆ ಸಿರಿತನ ಬಂದ್ರೆ, ಕೆಲದರ್ಜೆ ಯೋಚ್ನೆ ಮಾಡುವವರಿಗೆ, ಉನ್ನತ ಹುದ್ದೆ ಸಿಕ್ರೆ ಅಂತವುಕ್ಕೆ ದೊಡ್ಡ ಹುದ್ದೆ ಸಿಕ್ಕಿದರೆ ಅವುಕ್ಕೆ ಅದರ ಮೌಲ್ಯ ಗೊತ್ತಿರ್ದುಲೆ. ಅದನ್ನ ಬಳಿಸಿ ಕಂಬವ ರೀರಿ ನೀತಿನ ಅರಿಯು ತಿಳಿಯು ಸ ಇರ್ದುಲೆ.

ಪುಟ್ಟುಗೆ ಬಡತನದ ಕೂಡೆ ಮುರ್ಖತನವುಸ ಸೇರಿ ಅಂವೊಬ್ಬ ವಿದ್ಯೆ ಇಲ್ಲದ ದಡ್ಡನಾಗ್ತಿತ್. ಒಂದು ದಿನ ಅವಂಗೆ ಏನಾತ್‌ತ್ತೇಳಿರೆ ಆನ್ ಲೈನ್ ಬಂಪರ್ ಲಾಟರಿ ಬಾತ್. ಅಂದೆ ಅಂವ ಕೋಟ್ಯಾಧಿಪತಿ ಆತ್. ಜನಂಗ ಅವಂಗೆ ಹತ್ರದ ಸಂಬಂಧ ಆದೋ. ಬ್ಯಾಂಕ್‌ನವು ಇವನ ಸಾರ್ ಸಾರ್‌ತ ಕರ್ದೊ. ನೆಂಟರಿಷ್ಟರ್ ನಂಗೆ ಅಸ್ಟ್ ಕೊಡುರಾ ನಂಗೆ ಇಸ್ಟ್ ಕೊಡುರಾ ನಂಗೆ ಅಲ್ಲಿ ಸಾಲವುಟ್ಟು, ತೀರ್‌ಸಕ್ಕುತ ಹೇಳ್ದೊ.

ಆದ್ರೆ, ಪುಟ್ಟುಗೆ ದುಡ್ಡುನ ಏನ್ ಮಾಡಕ್ಕು, ಜನರೊಟ್ಟಿಗೆ ಹೆಂಗೆ ನಡ್ದ್ ಕೊಳ್ಳಕುತ ಒಂದ್ ಗೊತ್ತ್‌ತ್ತ್‌ಲೆ. ಅವಂಗೆ ದಿನ ಕಳ್ದಂಗೆ ದರ್ಪ ಅಹಂಕಾರ ಹುಟ್ಟಿತ್. ತನ್ನ ಹಿಂದಿನ ಸ್ಥಿತಿಗತಿನ ಮರ್ತತ್. ಕಳ್ಳ್ ಕುಡೇದು, ಇಸ್ಪಿಟ್ ಆಟ ಮನೆಗೆ ಯಾಗೋಳು ಬಾಡಿಗೆ ಜೀಪ್‌ಲಿ ಬಾದು ಹಿಂಗೆ ಕಾಲಕ್ರಮೇಣ ಇವನ ದುಡ್ಡೆಲ್ಲಾ ಖರ್ಚಾತ್. ಇವನ ಹೆಸ್ರ್ ದುಡ್ಡು ಎಲ್ಲಾ ಹೋತ್. ಕೊನೆ ಕೊನೆಗೆ ಎಲ್ಲನ ಮಾರಿಕಂಡತ್. ಪುಟ್ಟುಗೆ ಐಶ್ವರ್ಯ ಆಸ್ತಿ ಪಾಸ್ತಿ ಬಂದರು ಸಹ ಅದನ್ನ ಉಪಯೋಗಿಸಿಕ್ಕೆ ಸರಿಯಾಗಿ ಗೊತ್ತಿದ್ದರೆ, ಅಂವ ಮಾತ್ರ ಬುದ್ಧಿವಂತ ಅತಿತ್ತಾ. ಅದಿಕ್ಕೆ ನಮ್ಮ ಹಿರಿಯವು ಹೇಳ್ತಿದ್ದೊ ಅಲ್ಪಂಗೆ ಐಶ್ವರ್ಯ ಬಾಕನ ಅರ್ಧರಾತ್ರಿಲಿ ಕೊಡೆ ಹಿಡೇದುತಾ.

-ಪಿ. ಯಂ.ಪಿ. ಮೈಸೂರು.

N ಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ, ಹಿರಿಯರಿಲ್ಲ ಎಂದು ತಿಳಿಯುವುದು ಲೇಸು

*ಬಾಲ ಸಂಗಾತಿ ವಿಭಾಗ : ಕಥೆ - 11*

## ಯಾರು ಸುಖಿ

ಬಹಳ ಹಿಂದಿನ ಕಾಲಲಿ ಒಂದು ಹಕ್ಕಿ ಆಕಾಶಲಿ ಅತ್ತಂದ ಇತ್ತ, ಇತ್ತಂದ ಅತ್ತ ಹಾರಾಡಿಕಂಡ್ ಕೋರುಕ್, ಕೋರುಕ್ ತ ಕಿರ್‌ಚ್ ತಿತ್. ಕೋರುಕ್‌ತೇಳ್ರೆ ಯಾರ್ ನಿರೋಗಿ (ರೋಗ ಇಲ್ಲದೆ ಇರುವವ್ರು) ಹಕ್ಕಿನ ಪ್ರಶ್ನೆಗೆ ಯಾರು ಉತ್ತರ ಹೇಳುವ ಗೋಜಿಗೆ ಹೋತ್‌ಲೆ. ಎಲ್ಲವ್ರೂ ಕೇಳಿ ಕೇಳದಂಗೆ ಅವರವರ ಕೆಲ್ಸಲಿ ಮನ್ಸ್ ನೆಟ್ಟಿದ್ದೊ. ಆದರೂ ಹಕ್ಕಿಗೆ ನಿರಾಶೆ ಆತ್‌ಲೆ. ಯಾರಾದರೂ ನನ್ನ ಪ್ರಶ್ನೆಗೆ ಉತ್ತರ ಹೇಳುವೊತ ಆಶೆಲಿ ಯಾಗೋಳು ತನ್ನ ದಿನಚರಿಲಿ ಕೋರುಕ್ಕ್ ಕೋರುಕ್ಕ್‌ತ ಹಾಡಿಕಂಡ್ ಊರು ಕೇರಿ ಕಾಡ್ ಮೇಡ್ ಬೆಟ್ಟಗುಡ್ಡ ಎಲ್ಲಾ ಕಡೆ ಅಡ್ಡಾಡ್‌ತಿತ್. ಕುದ್ದ್‌ಕಂಡ್ ಕೋರುಕ್ಕ್‌ತ ಹಾಡ್‌ತ್. ಆಗ ಅದೇ ಮರದ ಕೆಳಗೆ ಒಬ್ಬ ಋಷಿ ಧ್ಯಾನ ಮಾಡ್ತಾ ಇತ್. ಆಗಿನ ಕಾಲದವ್ರುಕ್ಕೆ ಹಕ್ಕಿಗಳ ಭಾಷೆ ಅರ್ಥ ಆಗ್‌ತ್ತಿತ್. ಆ ಋಷಿ ಹಕ್ಕಿನ ಪ್ರಶ್ನೆಗೆ ತಕ್ಷಣ ಉತ್ತರ ಹೇಳ್. "ಹಿತಬುಕ್ಕ್" ತೇಳ್ರೆ, ಹಿತವಾಗಿ ತಿನ್ನುವವತ. ಅಂದರೆ ಒಳ್ಳೆ ಆಹಾರ ತಿಂಬವ "ಮಿತ ಬುಕ್" "ಋತ ಬುಕ್ಕ್" ಕಾಲಕ್ಕೆ ಸರಿಯಾಗಿ ತಿಂಬಂವ, ಅಂದರೆ ಹೊತ್ತು ಹೊತ್ತಿಗೆ ಸರಿಯಾಗಿ ತಿಂಬಂವತ. ಹಕ್ಕಿಗೆ ತುಂಬಾ ಸಂತೋಷ ಆಗಿ ಋಷಿಗೆ ಕೃತಜ್ಞತೆ ಹೇಳಿ, ಪಟಪಟನೆ ರೆಕ್ಕೆ ಬಡ್‌ಕ್ಯಂಡ್ ಹಾರಿಹೋತ್.

ಮಕ್ಕಳೆ ಹಕ್ಕಿಯ ಪ್ರಶ್ನೆಗೆ ಒಂದೇ ಶ್ಲೋಕಲಿ ಉತ್ತರ ಹೇಳ್ದ ಋಷಿ ಬೇರೆ ಯಾರು ಅಲ್ಲ, ವೈದ್ಯ ಋಷಿ "ವಾಗ್ಭಟ".

ನಮ್ಮ ಸರ್ವಜ್ಞ ಕೂಡ "ಊಟ ಬಲ್ಲವನಿಗೆ ರೋಗವಿಲ್ಲ" "ಮಾತು ಬಲ್ಲವನಿಗೆ ಜಗಳವಿಲ್ಲ" ತ ಹೇಳ್ದರ ಅರ್ಥಕೂಡ ಇದೇ. ನೀವ್ರೂ ಕೂಡ ಇದರ್ನ ಪರಿಪಾಲಿಸಿಕಂಡ್ ನಿರೋಗಿಗಳಾಗಿ, ಆಯುಷ್ಯವಂತರಾಗಿ.

-ಬಿಟ್ಟೀರ ಚೋಂದಮ್ಮ ಶಂಭು.

*ಬಾಲ ಸಂಗಾತಿ ವಿಭಾಗ : ಜ್ಞಾನ - 11*

## ಶಾಲೆಲಿ ಹೇಳಿಕೊಟ್ಟಿದ್ದೆಲ್ಲಾ ನಿಜ ಅಲ್ಲ ?

*ಅಂಶು ಭೋದಿನಿ:* ಇದ್ ವೈದಿಕ ವಿಜ್ಞಾನಕ್ಕೆ ಸಂಬಂಧ ಪಟ್ಟ ಗ್ರಂಥ. ಇದರ್ನ ರಚನೆ ಮಾಡ್ದ್ ಮಹರ್ಷಿ ಭರದ್ವಾಜರ್. ಇದರ್ಲಿ ಒಂದು ಸಾವಿರ ಸೂತ್ರಗ ಉಟ್ಟು. ಈ ಸೂತ್ರಗಳ ರಹಸ್ಯನ ತಿಳ್ಸಿಕೆ "ಭೋಧಾನಂದ ವೃತ್ತಿ" ತ್ತೇಳುವ ವ್ಯಾಖ್ಯಾನೂ ಉಟ್ಟು. ಈ ಗ್ರಂಥ ಸೂರ್ಯನ (ಸಾವಿರ) ಕಿರಣಗಳ ಹಿಂದೆ ಇರುವ ಅದ್ಭುತ ಶಕ್ತಿನ ಪರಿಚಯ ಮಾಡ್ದೆ. ದುರ್ದೈವದ ಸಂಗತಿತೇಳ್ರೆ ಇಂದ್ ಇದರ ಐವತ್ತು ಸೂತ್ರಗ ಇರುವ ಮೊದಲ ಭಾಗ ಮಾತ್ರ ಸಿಕ್ಕಿಟ್ಟು. ಈ ಗ್ರಂಥ ಒಟ್ಟು ಹನ್ನೆರಡ್ ಅಧ್ಯಾಯಗಳ್ನ ಹೊಂದಿದ್ದ್, ಹನ್ನೊಂದು ಅಧ್ಯಾಯಗ ಇನ್ನೂ ಸಿಕ್ಕಿತ್‌ಲೆ. ಸೂರ್ಯ ಕಿರಣಗಳ ಶಕ್ತಿಯ ಸಹಾಯಂದ ಬೇರೆ ಬೇರೆ ಯಂತ್ರಗಳ್ನ ತಯಾರಿಸುವ ಬಗ್ಗೆ ಈ ಗ್ರಂಥಲಿ ವಿವರಣೆ ಉಟ್ಟು. "ವೇದಗಳ್ಲಿ ಹುದುಗಿದ್ದ ವಿಜ್ಞಾನ ತತ್ವನ ಬೆಳಕಿಗೆ ತಾಕೆ ಈ ಸೂತ್ರಗಳ ರಚನೆ ಮಾಡ್‌ದ್ದೆತ". ಭರದ್ವಾಜ ಮುನಿ ಗ್ರಂಥದ ಆರಂಭಲಿ ತಿಳಿಸ್ಯೊಳೊ. ಸೂರ್ಯನ ಕಿರಣಗಳ್ಲಿ ಉಷ್ಣತೆ ಹಾಗೂ ಪ್ರಕಾಶದ ಜೊತೆಗೇ, ವಿದ್ಯುಚ್ಛಕ್ತಿನೂ ಇದ್ದ್ ವಿವಿಧ ಯಂತ್ರಗಳ ಮೂಲಕ ಅದರ್ನ ಪಡೆಯಕ್‌ತ್ತೇಳಿ ಈ ಗ್ರಂಥ ತಿಳ್ಸಿದೆ.

ಇದ್ ಅಲ್ಲದೆ ವಿವಿಧ ಗ್ರಹಗಳಿಗಿರುವ ಶಕ್ತಿಯ ಸ್ವರೂಪ ಏನ್ ಅವು ಇರುವ ಬಗ್ಗೆ ಪ್ರಮಾಣ ಏನ್ ಮುಂತಾದ ವಿಷಯಗಳ್ನ ಇಲ್ಲಿ ತಿಳಿಸಲಾಗಿತ್. ಯಂತ್ರಗಳ ಮೂಲಕ ಆ ಶಕ್ತಿನ ನಮಗೆ ಬೇಕಾದ ರೂಪಲಿ ಪಡ್‌ಕಂಡ್ ಉಪಯೋಗಿಸುವ ಬಗ್ಗೆನೂ ಈ ಗ್ರಂಥಲಿ ವಿವರಣೆ ಇತ್. ಅಷ್ಟೇ ಅಲ್ಲದೇ ವಿವಿಧ ಗ್ರಹಗಳಲ್ಲಿನ ಶಕ್ತಿಯ ಸ್ವರೂಪ ಮತ್ತೆ ಪ್ರಮಾಣನ ಅಳಿಯಕೆ ಯಂತ್ರಗಳ್ನ ಹೆಂಗೆ ತಯಾರ್ಸುದುತ ಇಲ್ಲಿ ತಿಳಿಸ್ಯೊಳೊ.

ಯಂತ್ರಗಳ ಮೂಲಕ ಸೂರ್ಯ ಕಿರಣಗಳ್ನ ಗ್ರಹಿಸುವ ಬಗ್ಗೆ ಹಾಗೂ ಅವುಗಳ್ನ ವಿಭಜಿಸುವ ಕ್ರಮದ ಬಗ್ಗೆನೂ ಈ ಗ್ರಂಥಲಿ ವಿವರಣೆ ಉಟ್ಟು. ಯಾವುದೇ ಸಂಪರ್ಕ ತಂತಿಯ ನೆರವಿಲ್ಲದೇ ದೂರಲಿರುವ ವ್ಯಕ್ತಿಯ ಸಂಭಾಷಣೆನ ಕೇಳಿಕೆ ಬೇಕಾದ ಯಂತ್ರನ ತಯಾರ್ಸಿರುವ ಬಗ್ಗೆನೂ ಇಲ್ಲಿ ನಿರೂಪಿಸಿರ್ದು ತುಂಬಾ ಅಚ್ಚರಿಯ ಸಂಗತಿ.

-ಬಿಟ್ಟೀರ ಚೋಂದಮ್ಮ ಶಂಭು.

## ಮಡಿಕೇರಿ ತಾಲ್ಲೂಕು ಬೋರ್ಡಿನ ಪ್ರಥಮ ಗೌಡ ಮಹಿಳೆ



ದಿ|| ಕೋಳುಮುಡಿಯನ ಪಾರ್ವತಿ (ಕಾಮವ್ವ)

ದಿ|| ಪಾರ್ವತಿಯವರು ಮಡಿಕೇರಿ ತಾಲ್ಲೂಕು ಕುಂಬಳದಾಳು ಗ್ರಾಮದ ಬೊಬ್ಬೀರ ತಮ್ಮಯ್ಯನವರ ಜೇಷ್ಠ ಪುತ್ರಿಯವರಾಗಿ 20-9-1937 ರಲ್ಲಿ ಜನಿಸಿದರು. ನಂತರ ತಮ್ಮ 19ನೆಯ ವರ್ಷ ಪ್ರಾಯದಲ್ಲಿ ಸದ್ರಿ ತಾಲ್ಲೂಕು ಗಾಳಿ ಬೀಡು ಗ್ರಾಮದ ಕೋಳುಮುಡಿಯನ ದಿ|| ತಮ್ಮಯ್ಯನವರ ಜೇಷ್ಠ ಪುತ್ರ ರಾಮಯ್ಯನವರನ್ನು 1955 ರಲ್ಲಿ ವಿವಾಹವಾಗಿ ಎರಡು ಗಂಡು ಮಕ್ಕಳನ್ನು 4 ಹೆಣ್ಣು ಮಕ್ಕಳನ್ನು ಹಡೆದಿರುತ್ತಾರೆ. ಸದರಿಯವರು ಉತ್ತಮ ಜಾನಪದ ಗೀತೆಗಳ ಗಾಯಕರಾಗಿದ್ದರು. ಅಲ್ಲದೆ ಒಗಟುಗಳನ್ನು ಹೇಳುವುದು ಮತ್ತು ಬಿಡಿಸಿ ಹೇಳಿ ಜನರನ್ನು ಮೆರಗು ಮಾಡುವಂತ ಅಭಿರುಚಿಯುಳ್ಳವರಾಗಿದ್ದು ಅಲ್ಲದೆ ದಿ|| ಪಾರ್ವತಿಯವರು 1968 ರಲ್ಲಿ ಮಡಿಕೇರಿ ತಾಲ್ಲೂಕಿನ ತಾಲ್ಲೋಕು ಬೋರ್ಡಿನ ಮೊಟ್ಟ ಮೊದಲ ಮಹಿಳಾ ಸದಸ್ಯೆಯಾಗಿ ಆಯ್ಕೆಯಾಗಿದ್ದು (ದಂಬೆಕೋಡಿ ಎ. ಚಿಣ್ಣಪ್ಪನವರ ಅಧ್ಯಕ್ಷತೆಯಲ್ಲಿ) ಸುಮಾರು 7 ವರ್ಷಗಳ ಕಾಲಾವಧಿಯಲ್ಲಿ ಜನರ ಸೇವೆಯಲ್ಲಿ ತೊಡಗಿ ಜನರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಅವರ ದಾಂಪತ್ಯ ಜೀವನದಲ್ಲಿ ಪತಿವ್ರತೆಯಾಗಿ ಸೇವೆ ಸಲ್ಲಿಸಿ ಪುತ್ರ ಪುತ್ರಿಯರಿಗೆ ವಿವಾಹಮಾಡಿ ತಮ್ಮೆಲ್ಲ ಕಾರ್ಯಚಟುವಟಿಕೆಗಳನ್ನು ಮುಗಿಸಿ ದಿನಾಂಕ 11-5-03 ನೇ ಸೋಮವಾರದಂದು ಧರ್ಮಸ್ಥಳದ ಮಂಜುನಾಥಸ್ವಾಮಿ ಮತ್ತು ಶ್ರೀ ಸುಬ್ರಹ್ಮಣ್ಯಸ್ವಾಮಿಯವರ ಪಾದಾರಕ್ಕೆ ಪೂಜೆ ಸಲ್ಲಿಸಿ ಹಿಂತಿರುಗಿದ ಅದೇ ದಿವಸ ಇವರು 12-5-2003 ರಂದು ರಾತ್ರಿ ದೈವಾಧೀನರಾಗಿ ಸ್ವರ್ಗಸ್ಥರಾಗಿರುತ್ತಾರೆ. ಅವರ ಸೇವೆ ಮತ್ತುಆದರ್ಶ ಲಕ್ಷಣಗಳು ಸದಾ ಎಲ್ಲರಿಗೂ ದಾರಿದೀಪವಾಗಲೆಂದು ಹಾರೈಸುದಲ್ಲದೆ ಅವರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನು ನೀಡಲೆಂದು ಜನಾಂಗದ ಪರವಾಗಿ ಪ್ರಾರ್ಥಿಸೋಣಾ.

ವರದಿ: ಮಳ್ಳಂದಿರ ವಾಣಿ ಶೇಷಗಿರಿ, ಮರಗೋಡು.

O ದುತ್ತಾ ಇದ್ದರೆ ಜ್ಞಾನ ಹೆಚ್ಚಾಗುತ್ತದೆ

# ಜನನೇಂದ್ರಿಯದ ಹುಣ್ಣುಗಳು

ಲೈಂಗಿಕ ರೋಗಗಳಲ್ಲಿ ಹೆಚ್ಚಿನವು ಜನನೇದ್ರಿಯಗಳಲ್ಲಿ ಹುಣ್ಣುಗಳನ್ನು ಉಂಟು ಮಾಡುತ್ತವೆ. ಇಂತಹ ಸುಮಾರು 20 ಕ್ಕೂ ಹೆಚ್ಚು ಲೈಂಗಿಕ ರೋಗಗಳನ್ನು ಇದುವರೆಗೆ ಗುರುತಿಸಲಾಗಿದೆ. ಅವೆಲ್ಲವುಗಳ ಸಂಕ್ಷಿಪ್ತ ವಿವರಣೆ ಈ ಲೇಖನದ ಗುರಿ ಅಲ್ಲ. ಸಾಮಾನ್ಯವಾಗಿ ಕಂಡುಬರುವ ರೋಗಗಳ ಬಗ್ಗೆ ಅಗತ್ಯವಾಗಿರುವ ಮಾಹಿತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಜನನೇದ್ರಿಯಗಳಲ್ಲಿ ಕಂಡುಬರುವ ಹುಣ್ಣುಗಳನ್ನು ಎರಡು ರೀತಿಯ ರೋಗಗಳ ಗುಂಪುಗಳಾಗಿ ವಿಂಗಡಿಸಬಹುದು.

1. ಲೈಂಗಿಕ ರೋಗವಾಗಿ ಹರಡುವ ಹುಣ್ಣುಗಳು.
2. ಲೈಂಗಿಕ ರೋಗಕ್ಕೆ ಒಳಪಡದ ಚರ್ಮಸಂಬಂಧಿ ಕಾಯಿಲೆಗಳಿಂದ ಉಂಟಾಗುವ ಹುಣ್ಣುಗಳು.

ಮೊದಲನೆ ಬಗೆಯವು ವೀರ್ಯ ಅಥವಾ ಯೋಗಿ ದ್ರವದ ಮೂಲಕ ಲೈಂಗಿಕ ಸಂಪರ್ಕದಿಂದ ಹರಡುವ ಹುಣ್ಣುಗಳು.

ಜನರ ಲೈಂಗಿಕ ಕ್ರಿಯೆಯ ರೀತಿಗೆ ಅನುಸಾರವಾಗಿ ಈ ಹುಣ್ಣುಗಳು ಜನನೇಂದ್ರಿಯದಲ್ಲಿ, ಬಾಯಿಯಲ್ಲಿ ಇತ್ಯಾದಿ ಕಾಣಿಸಿಕೊಳ್ಳುತ್ತವೆ. ಕಣ್ಣಿಗೆ ಸಾಮಾನ್ಯವಾಗಿ ಒಂದೇ ರೀತಿಯ ಹುಣ್ಣಿನಂತೆ ಕಂಡರೂ ಲೈಂಗಿಕ ರೋಗವಾಗಿ ಹರಡುವ ಈ ಹುಣ್ಣುಗಳಲ್ಲಿ ಅನೇಕ ವಿಧಗಳಿವೆ. ಅವುಗಳಲ್ಲಿ ಮುಖ್ಯವಾದದ್ದು:

*ಅ) ಸಿಫಿಲಿಸ್ :* ಯೋನಿಯ ಒಂದು ಬದಿಯಲ್ಲಿ 25 ಪೈಸೆಯ ನಾಣ್ಯದ ಹಾಗೆ ನೋವಿಲ್ಲದೆ ಅಥವಾ ಸ್ವಲ್ಪ ನೋವಿರುವ ಗಟ್ಟಿಯಾದ ಹುಣ್ಣು ಉಂಟಾಗುತ್ತದೆ. ಕೆಲವೊಮ್ಮೆ ಈ ಹುಣ್ಣಿನ ಸಂಪರ್ಕದಿಂದ ಯೋನಿಯ ಇನ್ನೊಂದು ಬದಿಯಲ್ಲಿ ಇದೇ ರೀತಿಯ ಹುಣ್ಣು ಬರುವ ಸಾಧ್ಯತೆ ಇದೆ. ತೊಡೆಯಲಿ ಗಣಲೆ (ಬಾವು) ಇರಲೂಬಹುದು. ಯಾವ ಚಿಕಿತ್ಸೆ ತೆಗೆದುಕೊಳ್ಳದಿದ್ದರೂ 2-3 ವಾರಗಳಲ್ಲಿ ಒಣಗಿ ಕೊಳ್ಳುತ್ತದೆ. ಆದರೆ ಇದರಿಂದ ಸಮಾಧಾನ ಪಟ್ಟು ಕೊಳ್ಳಬೇಡಿ. ಅದು ರೋಗ ಕ್ರಿಮಿ ಕಣ್ಣಿಗೆ ಕಾಣದ ಹಾಗೆ ದೇಹದೊಳಗೆ ಅಡಗಿಕೊಳ್ಳುವ ಕ್ರಮ.

ಈಗ ಯೋಚಿಸಿ, ಯಾವ ಕಾರಣದಿಂದ ಈ ಹುಣ್ಣು ಬಂದಿರಬಹುದು? ನೀವು ಅಥವಾ ನಿಮ್ಮ ಬಾಳಸಂಗಾತಿ ಪರಸ್ಪರ ಪ್ರಾಮಾಣಿಕವಾಗಿದ್ದೀರಾ? ಇದು ನಿಮ್ಮ ಸಂಗಾತಿಗೆ ಇತ್ತೇ? ಇಲ್ಲ, ನೀವು ಅನ್ಯರ ಸಂಬಂಧ ಮಾಡಿದ್ದೀರಾ? ನಿಮಗರಿವಿಲ್ಲದೆಯೇ ಯಾರದರೂ ನಿಮ್ಮ ಅಕ್ರಮ ಸಂಪರ್ಕ ಅಥವಾ ಮಾನಭಂಗ ಮಾಡಿದ್ದಾರೆಯೇ?

ಸಿಫಿಲಿಸ್ ಈ ಹುಣ್ಣು 2-3 ವಾರಗಳಲ್ಲಿ ಚಿಕಿತ್ಸೆ ಇಲ್ಲದೆ ಒಣಗಿಕೊಳ್ಳುತ್ತದೆ. ದೇಹದೊಳಗೆ ಅಡಗಿ ಕುಳಿತ ರೋಗ ಕ್ರಿಮಿ, 2-3 ತಿಂಗಳುಗಳು ಕಳೆದ ಮೇಲೆ ಬೇರೆ ಬೇರೆ ರೂಪದಲ್ಲಿ ಮರುಕಳಿಸಿ ಹೆಮ್ಮರದಂತಾಗುತ್ತದೆ. ಚರ್ಮದಲ್ಲಿ ತುರಿಕೆಯಿಲ್ಲದೆ ಕೆಂಪು ಕೆಂಪು ಹುಣ್ಣುಗಳು ಬಾವುಗಳು, ಯೋನಿಯಲ್ಲಿ ಕೆಡುವಿನಂತಹ (ಚರ್ಮದ ಸಣ್ಣ ಗಂಟು -Wart) ಹುಣ್ಣುಗಳು ಬರುತ್ತವೆ. ಇದೇ ಸಮಯದಲ್ಲಿ ಗರ್ಭಿಣಿಯಾದರೆ ಹುಟ್ಟುವ ಮಗುವಿನ ನ್ಯೂನತೆ ಅಥವಾ ಅಂಗವಿಕಲತೆ ಉಂಟಾಗಲೂಬಹುದು. (ಇದೇ ಕಾರಣದಿಂದಾಗಿ ಆಸ್ಪತ್ರೆಗಳಲ್ಲಿ ಎಲ್ಲ ಗರ್ಭಿಣಿ ಹೆಂಗಸರಿಗೂ, ರಕ್ತದ ವಿ.ಡಿ.ಆರ್. ಎಲ್. ಎಂಬ ಲೈಂಗಿಕ ರೋಗ ಪರೀಕ್ಷೆಗೆ ಒಳಪಡಿಸುತ್ತಾರೆ) ಈ ರೀತಿ ಚರ್ಮದಲ್ಲಿ ಕಾಣಿಸಿಕೊಳ್ಳುವ ತೊಂದರೆಗಳನ್ನು ಅಥವಾ ವಿ.ಡಿ.ಆರ್. ಎಲ್ . ಪೊಸಿಟಿವ್ ಹಂತವನ್ನು ಸೆಕೆಂಡರಿ ಸಿಫಿಲಿಸ್ ಎಂಬ ಔಷಧಿಯಿಂದ ಸಂಪೂರ್ಣ ಗುಣಪಡಿಸಲು ಸಾಧ್ಯವಿದೆ. ಸರಿಯಾದ ಚಿಕಿತ್ಸೆ ಆಗದಿದ್ದಲ್ಲಿ ಈ ಕಾಯಿಲೆ ಮೆದುಳು ಮತ್ತು ಹೃದಯಕ್ಕೆ ಹಾನಿ ಉಂಟುಮಾಡುತ್ತವೆ. ಮೆದುಳಿನ ಹಾನಿಯಿಂದ ಬುದ್ಧಿ ಭ್ರಮಣೆಗೆ ಒಳಗಾಗಬಹುದು. ನಗರಗಳಲ್ಲಿ ಹುಚ್ಚಿಯರಂತೆ ತಿರುಗಾಡುವ ಅನೇಕ ಮುದಿ ವೇಶ್ಯೆಯರು ಈ ರೋಗಕ್ಕೆ ಬಲಿಯಾಗುತ್ತಾರೆ. ಸಿಫಿಲಿಸ್ ರೋಗ ದೇಹವನ್ನು ಗೆದ್ದಲು ಹುಳದಂತೆ ಆಕ್ರಮಿಸಿ ಕೊನೆಯಲ್ಲಿ ದೇಹವೇ ನಶಿಸಿ ಹೋಗುತ್ತದೆ.

ಪ್ರಾರಂಭದಲ್ಲಿ ಗುಣಪಡಿಸಲಾಗುವ ಈ ರೋಗಕ್ಕೆ ಸಂಕೋಚದಿಂದ ವೈದ್ಯರ ಬಳಿ ಹೋಗದೆ ಇದ್ದರೆ ಏನೆಲ್ಲಾ ಅನಾಹುತ ಆಗುತ್ತದೆಂದು ಯೋಚಿಸಿ. ಆದುದರಿಂದ ಯೋನಿಯಲ್ಲಿ ಯಾವುದೇ ರೀತಿಯ ಹುಣ್ಣು ಬಂದೊಡನೆ ವೈದ್ಯರನ್ನು ಕಾಣುವುದು ಒಳ್ಳೆಯದು. ಲೈಂಗಿಕ ಸಂಪರ್ಕದ 90 ದಿವಸಗಳ ಒಳಗೆ ಇಂತಹ ರೋಗ ಕಾಣಿಸಿಕೊಳ್ಳಬಹುದು ಎಂಬುದು ನೆನಪಿರಲಿ.

*ಆ) ಜನನೇಂದ್ರಿಯ ಹರ್ಪಿಸ್ :* ಇದು ಸಾಮಾನ್ಯವಾಗಿ ಕಾಣುವ ಲೈಂಗಿಕ ಕಾಯಿಲೆ. ಆದರೆ ನೆನಪಿಡಿ, ಮುಖ ಸೊಂಟ, ಕೈ ಕಾಲು ಮೊದಲಾದ ಕಡೆ ಬರುವ ಸರ್ಪಸುತ್ತು ಎಂದು ಕರೆಯುವ ರೋಗಕ್ಕೂ (ಇಂಗ್ಲೀಷಿನಲ್ಲಿ ಹರ್ಪಿಸ್ ಜೋಸ್ಟರ್, ಸಾಮಾನ್ಯವಾಗಿ ಹರ್ಪಿಸ್ ಎನ್ನುತ್ತಾರೆ) ಇದಕ್ಕೂ ಸಂಬಂಧವಿಲ್ಲ.

ಯೋನಿಯಲ್ಲಿ ನೋವಿನಿಂದ ಕೂಡಿದ ಗುಳ್ಳೆಗಳು ಇದ್ದು, ತುರಿಕೆ, ಬಾವು ಉರಿಮೂತ್ರ, ಬಿಳುಪು ಹೋಗುವುದು ಇರುತ್ತದೆ. ಇದು ಹರ್ಪಿಸ್ ಸಿಂಪ್ಲೆಕ್ಸ್ ಎಂಬ ವೈರಸ್‌ನಿಂದ ಬರುವಂತಹ ಲೈಂಗಿಕ ಕಾಯಿಲೆ. ಪರ ಪುರುಷ/ಸ್ತ್ರೀಯೊಡನೆ ನಡೆಸಿದ ಅನೈತಿಕ ಲೈಂಗಿಕ ಕ್ರಿಯೆಯ ಒಂದು ವಾರದೊಳಗೆ ಈ ರೋಗ ಬರಬಹುದು. ಮದುವೆಯಾಗಿ ಒಂದು ವಾರದೊಳಗೆ ಅಥವಾ ಮದುವೆಯ ಹೊಸತರಲ್ಲಿ ಹೆಂಡತಿಗೆ ಈ ರೋಗ ಬಂದರೆ, ಗಂಡನಲ್ಲಿ ಈ ರೋಗ ಮೊದಲೇ ಅಡಗಿ ಕುಳಿತಿತ್ತು ಎಂದು ಅರ್ಥ. ಗಂಡನಿಗೆ ಮದುವೆಗೆ ಮೊದಲು ಆದ ಲೈಂಗಿಕ ಸಂಪರ್ಕದಿಂದ ಈ ವೈರಸ್ ಆತನ ದೇಹಕ್ಕೆ ಸೇರಿ ನರದೊಳಗೆ ಅಡಗಿ ಕುಳಿತಿರುತ್ತವೆ. ಮೊದಲಿಗೆ, ಅಂದರೆ ಈ ವೈರಸ್ ವೀರ್ಯ ಅಥವಾ ಯೋನಿದ್ರವದೊಂದಿಗೆ ದೇಹವನ್ನು ಒಳಹೊಕ್ಕಾಗ ಹುಣ್ಣುಗಳು

ಕಾಣಿಸಿಕೊಳ್ಳುತ್ತವೆ.

ಹರ್ಪಿಸ್ ರೋಗದಿಂದ ಯೋನಿಯಲ್ಲಿ ತುರಿಕೆ ಉಂಟಾಗಿ ನೋವಿನಿಂದ ಕೂಡಿದ ಗುಳ್ಳೆಗಳು ಬರುತ್ತದೆ. ಒಂದೆರಡು ದಿವಸಗಳಲ್ಲಿ ಗುಳ್ಳೆಗಳು ಒಡೆದು ಹುಣ್ಣುಗಳಾಗುತ್ತವೆ. ಇದರಿಂದ ಹಳದಿ ಮಿಶ್ರಿತ ಕೀವಿನಂತೆ ಬಿಳುಪು ಕಾಣಿಸಿಕೊಳ್ಳುವುದು. ಕೆಟ್ಟವಾಸನೆ ಇರಲೂಬಹುದು. ಯೋನಿಯಲ್ಲಿ ಬಾವು ಇರಬಹುದು. ಉರುಮೂತ್ರ ಇರಬಹುದು. ನಡೆಯಲು, ಕುಳಿತುಕೊಳ್ಳಲು ಸಾಧ್ಯವಾಗದಷ್ಟು ನೋವು ಇರುತ್ತದೆ. ಜ್ವರ ಕಾಲು ಸೆಳೆತ ಇರಲೂಬಹುದು.

ಲೈಂಗಿಕ ಹರ್ಪಿಸ್ ರೋಗ ಔಷಧಿ ಮಾಡದಿದ್ದರೂ ಎರಡು ವಾರಗಳಲ್ಲಿ ಗುಣಮುಖವಾಗುತ್ತದೆ. ಆದರೆ ನರಗಳಲ್ಲಿ ಈ ವೈರಸ್ ಸುಮಾರು 5 ರಿಂದ 15 ವರ್ಷಗಳವರೆಗೆ ಅಡಗಿ ಕುಳಿತಿರಬಲ್ಲದು. ಲೈಂಗಿಕ ಕ್ರಿಯೆಯ ಸಮಯದಲ್ಲಿ ಹರ್ಪಿಸ್ ರೋಗದ ವೈರಸ್ ವೀರ್ಯದೊಂದಿಗೆ ಯೋನಿಯನ್ನು ಸೇರಿ ಹೆಂಗಸರಲ್ಲಿ ನೀರು ಗುಳ್ಳೆಗಳು ಉಂಟಾಗುತ್ತವೆ. ಒಂದೆರಡು ದಿವಸಗಳಲ್ಲಿ ನೋವಿನಿಂದ ಕೂಡಿದ ಹುಣ್ಣುಗಳಾಗುತ್ತವೆ. ಪುನಃ 2-3ವಾರಗಳಲ್ಲಿ ಹುಣ್ಣು ಒಣಗಿ, ನರಗಳಲ್ಲಿ ಈ ವೈರಸ್ ಅಡಗಿಕೊಳ್ಳುತ್ತದೆ. ಮುಟ್ಟಾಗುವ ಸಮಯದಲ್ಲಿ ಅಥವಾ ಅತಿಯಾಗಿ ದೈಹಿಕ ಮಾನಸಿಕವಾಗಿ ಬಳಲಿದ ಸಮಯದಲ್ಲಿ ಯೋನಿಯಲ್ಲಿ ಹುಣ್ಣುಗಳು ಸುಮಾರು 15 ವರ್ಷಗಳವರೆಗೆ ಕಾಣಿಸಿಕೊಳ್ಳುತ್ತಾ ಇರಬಹುದು.

ಗಂಡಸರಲ್ಲಿ ಹುಣ್ಣುಗಳು ಕಾಣಿಸಿಕೊಳ್ಳುವುದು ನಿಂತಿದ್ದರೂ, ಹೆಂಗಸರಲ್ಲಿ ಹುಣ್ಣುಗಳುಂಟಾಗುತ್ತದೆ. ಆದುದರಿಂದ ಈ ಕಾಯಿಲೆ ಬಂದವರು ರೋಗ ಸಂಪೂರ್ಣ ಗುಣವಾಗುವವರೆಗೆ ಪ್ರತಿ ಲೈಂಗಿಕ ಕ್ರಿಯೆಗೂ ಕಾಂಡೋಂ ಉಪಯೋಗಿಸಬೇಕು. ಹರ್ಪಿಸ್ ರೋಗದಿಂದಾಗಿ ಮದುವೆಯಾದ ಒಂದು ವಾರದೊಳಗೆ ಕೆಲವು ಹೆಂಗಸರಿಗೆ ಅಥವಾ ಗಂಡಸರಿಗೆ ಜನನಾಂಗದಲ್ಲಿ ನೋವಿನ ಗುಳ್ಳೆಗಳು ಉಂಟಾದಾಗ ಯೋಚಿಸುವ ಸರದಿ ವೈದ್ಯರದ್ದು. ಮದುವೆಗೆ ಮೊದಲು ಹೀಗೆ ಇರಲೇ ಇಲ್ಲ. ಮದುವೆಯಾದ ಕೂಡಲೇ ಯಾಕೆ ಹೀಗಾಯಿತು ಎಂಬ ಹೆಣ್ಣಿನ ಕಡೆಯವರ ಪ್ರಶ್ನೆಗೆ ಮತ್ತು ನಮ್ಮ ಮಗನಿಗಿಲ್ಲ. ಸೊಸೆಗೆ ಹೇಗೆ ಬಂತು ಎಂಬ ಗಂಡಿನ ಕಡೆಯವರ ಪ್ರಶ್ನೆಗಳಿಗೆ ವೈದ್ಯರು ಯೋಚಿಸಿ, ಸಾಮಾಜಿಕ ಸಂದರ್ಭಗಳನ್ನು ಅರ್ಥಮಾಡಿಕೊಂಡು ಉತ್ತರ ಕೊಡಬೇಕಾಗುತ್ತದೆ. ಅನೇಕ ವೇಳೆ ವೈದ್ಯರನ್ನು ಗದರಿಸಿ ಸರ್ಟಿಫಿಕೆಟ್ ಪಡೆಯುವ ಪ್ರಯತ್ನ ನಡೆದದ್ದೂ ಇದೆ.

ಜನನೇಂದ್ರಿಯದ ಹರ್ಪಿಸ್ ಗರ್ಭಿಣಿ ಹೆಂಗಸರಲ್ಲಿ ಕಾಣಿಸಿಕೊಂಡರೆ ಇನ್ನಷ್ಟು ಹೆಚ್ಚಿನ ತೊಂದರೆ ಇದೆ. ಮೊದಲ 3 ತಿಂಗಳ ಒಳಗೆ ಹುಣ್ಣುಗಳು ಕಾಣಿಸಿಕೊಂಡರೆ ಗರ್ಭ ಹೋಗಬಹುದು ಅಥವಾ ಚಿಕ್ಕ ಗಾತ್ರದ ನಿಶ್ಕ್ರಿಯ ರೋಗಪೀಡಿತ ಮಗು ಜನಿಸಬಹುದು. ಅದು ನಿಗದಿತ ದಿನಕ್ಕೆ ಎಷ್ಟೋ ಮುಂಚಿತವಾಗಿ ಅಕಾಲಿಕ, ಸಂಪೂರ್ಣಬೆಳೆಯದ ಮಗುವಿನ ಜನನವಾಗುವ ಅಪಾಯ ಇರುತ್ತದೆ.

ಇನ್ನು ಹೆರಿಗೆಯ ವೇಳೆ ಜನನಾಂಗದಲ್ಲಿ ಹುಣ್ಣುಗಳು ಇದ್ದರೆ ಶಸ್ತ್ರ ಚಿಕಿತ್ಸೆ (ಸಿಸೇರಿಯನ್) ಯ ಮೂಲಕ ಮಗುವನ್ನು ತೆಗೆಯುವುದು ಒಳ್ಳೆಯದು. ಇಲ್ಲವಾದಲ್ಲಿ ಹುಟ್ಟುವ ಮಗುವಿನ ಕಣ್ಣು, ಗಂಟಲುಗಳಿಗೆ ಈ ಕ್ರಿಮಿ ಅಂಟಿಕೊಳ್ಳುವ ಸಾಧ್ಯತೆ ಇದೆ. ಅಥವಾ ಹೆರಿಗೆಗೆ ಒಂದು ವಾರ ಮೊದಲು ಎಸೈಕ್ಲೋವಿರ್ ಎಂಬ ಮಾತ್ರೆಯನ್ನು ಗರ್ಭಿಣಿ ಸೇವಿಸುವ ಬಗ್ಗೆ ವೈದ್ಯರೊಡನೆ ಚರ್ಚಿಸಬೇಕು. ಈ ರೀತಿ ರೋಗಕ್ಕೆ ಒಳಗಾದ ಗರ್ಭಿಣಿಯರನ್ನು ಚರ್ಮ ಹಾಗೂ ಲೈಂಗಿಕ ರೋಗ ತಜ್ಞರಾದ ವೈದ್ಯರಲ್ಲಿ ಪರೀಕ್ಷಿಸುವುದು ಕೂಡ ಪ್ರಯೋಜನಕರ.

ಲೇಖನ -ಡಾ. ಪ್ರಸನ್ನ ನರಹರಿ, ಚರ್ಮ ಹಾಗೂ ಲೈಂಗಿಕ ರೋಗಗಳತಜ್ಞ, ಇನ್‌ಸ್ಟಿಟ್ಯೂಟ್‌ಆಫ್ ಅಪ್ಲೈಯಿಡ್ ಡರ್ಮಟೋಲಜಿ, ನಾಯಕ್ಸ್ ರಸ್ತೆ, ಕಾಸರಗೋಡು - 21

---

## ದಂಬೆಕೋಡಿ ಕ್ರಿಕೆಟ್ ಕಪ್

ವಿಶ್ವಕಪ್ ಮುಗ್‌ದಂಗೆ ದಂಬೆಕೋಡಿ ಕಪ್ ಸುರಾತಾ
ಗೌಡರ ಮನೆವು ಸುರುಮಾಡ್ದೊ ಒಗ್ಗಟ್‌ಬೇಕುತ
ಮ್ಯಾನ್ಸ್ ಕಾಂಪೌಂಡ್ ಮೈದಾನಲಿ ದಂಬೆಕೋಡಿ ಕ್ರಿಕೆಟ್ ಕಪ್
ನಡೆದದೆತೇಳಿ ಅಂದೇ ಎಲ್ಲವುಕೆ ಗೊತ್ತಿತ್ತ್.

ಹಂಗೇತೇಳಿ ಮೈದಾನಲಿ ಊರು ನಾಡ್
ಗೌಡರು ಎಲ್ಲಾ ಅಲ್ಲೇ ಸೇರಿದ್ದೊ ॥
ಗಣ್ಯರ್ ಬಂದೋಳೊ ವೇದಿಕೆಲಿ ದೀಪನ ಉರ್ಸಿದೊ
ದೀಪದ ಹಂಗೆ ಕ್ರಿಕೆಟ್ ಮ್ಯಾಚ್ ಬೆಳ್ಗೊಕುತೇಳಿ
ಹರ್ಸಿದೊ॥

ಮೈದಾನ ಸುತ್ತ ಕುದ್ದ ಜನರ ಕಣ್ಣೆಲ್ಲಾ ಗ್ರವುಂಡ್‌ಲ್ಲಿತ್ತ್
ಮದುವೆಗು ಬಂದಂಗಾತ್ ಮ್ಯಾಚ್ ನೋಡ್ಕಂಗಾತ್
ಹೆಣ್ಮಕ್ಕೆಲ್ಲ ಒಳ್ಳೊಳ್ಳೆ ಸೀರೆ ಉಟ್‌ಕಂಡ್ ಬಂದಿದ್ದೊ ॥
ಗೂಡೆಗಳು ಬಂದೋ ಹೈದಗಳು ಬಂದಿದ್ದೊ

ಅಜ್ಜಿಕ ಪಿಳ್ಳೆಕಳ ಕರ್ಕಂಡ್ ಬಂದೋ ಕ್ರಿಕೆಟ್ ಮ್ಯಾಚ್
ನೋಡಿಕೆತೇಳಿ ಊರು ನಾಡ್ ಗೌಡರ್ ಅಲ್ಲಿ ಸೇರಿದ್ದೊ ॥
ದಂಬೆಕೋಡಿ ಕ್ರಿಕೆಟ್‌ಮ್ಯಾಚ್ ನಡ್‌ದದೆತೇಳಿ
ಊರು ನಾಡ್ ಗೌಡರ್ ಎಲ್ಲಾ ಸೇರಿದ್ದೊ 10 ದಿನ
ಕಾಣೆ ಹೂಡಿದ್ದೊ.॥

ಆಟದ ಮುಂದೆ ಕೆಲ್ಸ ಇಲ್ಲೇ ಕೆಲ್ಸದ ಮುಂದೆ ಆಟ ಇಲ್ಲೆ
ಎಲ್ಲವು ಇದರ್ನ ತಿಳಕಂಡ್ರೆ ಮನೆಗೂ ಹೆಸ್ರ್ ಬಂದದೆ
ಓಡಿ ಓಡಿ ರನ್ನನ್ಸ್ ಆದೋ ಬಾರ್ಸಿ ಬಾರ್ಸಿ ಸಿಕ್ಸರ್ ಮಾಡ್ದೋ॥
ನಾವು ನೀವೆಲ್ಲವು ನೋಡ್ದೋ ಕ್ರಿಕೆಟ್ ಮ್ಯಾಚ್‌ನ

ಮುಂದಕು ಹಿಂಗೆ ನಡಿತಾ ಇರ್ಲಿ ನಮ್ಮವು ಎಲ್ಲವು ಮುಂದಕ್ಕೆ ಬರ್ಲಿ
ಸಾಂಸ್ಕೃತಿಕ ಅಕಾಡೆಮಿ ಮೆರಿತಾ ಇರ್ಲಿ ಕೊಡಗು ಸಂಗಾತಿಲಿ
ಬರಿತಾ ಇರ್ಲಿ॥

ಕುಲದೇವ್ರು ವೆಂಕಟರಮಣ ಸ್ವಾಮಿನ ಎಲ್ಲವು ನೆನಿಯೋಕು
ಮ್ಯಾನ್ಸ್ ಕಾಂಪೌಂಡ್ ಮೈದಾನಲಿ ಕ್ರಿಕೆಟ್ ಆಡ್‌ದವುಕು

ಓಡಾಡಿ ಕೆಲ್ಸ ಮಾಡ್‌ದವುಕು ಬಂದ್‌ವುಕು ನೋಡ್‌ದವುಕು
ದೇವ್ರು ಒಳ್ಳೆದ್ ಮಾಡ್ಲಿತ್ತೇಳಿ ಬೇಡೋನಾ ನಾವೆಲ್ಲಾ ॥

ರಚನೆ: ಚೈತನ್ಯ ಜಾನಕಿ

---

# ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದ ಹಿರಿಯ ವಾಯುಸೇನಾಧಿಕಾರಿ ಶ್ರೀ ಅಯ್ಯೇಟಿರ ಗಣಪತಿ ಮನೋಜ್ ಕುಮಾರ್



ಮಡಿಕೇರಿ ತಾಲ್ಲೂಕು, ಮರಂದೊಡ ಗ್ರಾಮದ ಅಯ್ಯೇಟಿರ ಗಣಪತಿ ಮತ್ತು ಕಮಲ ದಂಪತಿಗಳ ಸುಪುತ್ರನಾಗಿ ದಿನಾಂಕ 9-3-1963 ರಲ್ಲಿ ಜನಿಸಿದರು. ನಂತರ ಬೆಳಗಾಂ ನಗರದ ಸ್ಯಂಟ್ ಮೇರಿಸ್ ಇಂಗ್ಲೀಷ್ ಶಾಲೆಗೆ ಸೇರ್ಪಡೆಯಾದರು. ನಾಲ್ಕನೆ ತರಗತಿಯಿಂದ ಕಾಲೇಜು ತನಕ ಹುಬ್ಬಳ್ಳಿಯಲ್ಲಿ ಓದಿದರು. ಬಿ. ವಿ. ಭೂಮಿರೆಡ್ಡಿ ಕಾಲೇಜಿನಿಂದ ಬಿ.ಇ, ಮೆಕ್ಯಾನಿಕಲ್ ಇಂಜೀನಿಯರಾಗಿ 1985 ರಲ್ಲಿ ತೇರ್ಗಡೆಯಾದರು.

ದಿನಾಂಕ 19-8-1985 ರಲ್ಲಿ ಭಾರತೀಯ ವಾಯು ದಳದಲ್ಲಿ ಕಮಿಶನ್ಡ್ ಆಫೀಸರ್ ಆಗಿ ಸೇರ್ಪಡೆ ಗೊಂಡರು. ಸುಮಾರು ಒಂದೂವರೆ ವರ್ಷದ ನಂತರ ಬೆಂಗಳೂರಿನ ಜಾಲಹಳ್ಳಿಯಲ್ಲಿರುವ ಏರ್‌ಫೋರ್ಸ್ ಟೆಕ್ನಿಕಲ್ ಕಾಲೇಜಿನಿಂದ 1987 ರ ಜನವರಿ ತಿಂಗಳಲ್ಲಿ ತಮ್ಮ ಟ್ರೈನಿಂಗ್ ಅನ್ನು ಮುಗಿಸಿ ಶಾಶ್ವತ ಕಮಿಷನ್ಡ್ ಆಫೀಸರ್ ಆಗಿ ನೇಮಕಗೊಂಡರು.

ತಮ್ಮ ಮೊದಲ ಕರ್ತವ್ಯ ಸ್ಥಳ ಅಂಬಾಲಕ್ಕೆ ವರ್ಗಾವಣೆ ಗೊಂಡರು. ಆ ಸಂದರ್ಭದಲ್ಲಿ ಭಾರತೀಯ ವಾಯುದಳದ ಜಾಗ್ವಾರ್ ಏರ್‌ಕ್ರಾಫ್ಟ್‌ನಲ್ಲಿ ಟ್ರೇನಿಂಗ್ ಮುಗಿಸಿದರು. ತದ ನಂತರ ಫ್ಲೈಟ್ ಲೆಫ್ಟಿನೆಂಟ್ ಆಗಿ ಬಡ್ತಿ ಪಡೆದರು. ಅನಂತರ ಏರ್‌ಕ್ರಾಫ್ಟ್ ಸಿಸ್ಟಂ ಟ್ರೈನಿಂಗ್ ಎಸ್ಟಾಬಿಲಿಷ್‌ಮೆಂಟ್ (ASTE) ಬೆಂಗಳೂರಿನಲ್ಲಿ ಟ್ರೆನಿಂಗ್ ಮುಗಿಸಿದ ಸಂದರ್ಭದಲ್ಲಿ ಅಂದರೆ 1994 ರಲ್ಲಿ ಸ್ಕ್ವಾಡ್ರನ್ ಲೀಡರ್ ಆಗಿ ಮುಂಬಡ್ತಿ ಹೊಂದಿದರು. ದೇಶದ ಹಲವಾರು ಪ್ರದೇಶಗಳಲ್ಲಿ ವರ್ಗಾವಣೆಗೊಂಡು ಸಾಕಷ್ಟು ಅನುಭವ ಹೊಂದಿ, ಗುಜರಾತಿನ ನಲಿಯಾ ಸ್ಥಳದಿಂದ ಪುನಃಹ ಬೆಗಳೂರಿನ ASTE ಗೆ ಬಂದರು. ಅಲ್ಲಿ ದಿನಾಂಕ 21-4-2003 ರಂದು ತಮ್ಮ ಈಗಿನ ವಿಂಗ್ ಕಮಾಂಡರ್ ಪದವಿಗೆ ಮುಂಬಡ್ತಿ ಪಡೆದರು. ಈ ಮಧ್ಯೆ ಇವರು ಫ್ರಾನ್ಸ್ ಮತ್ತು ಇಂಗ್ಲೆಂಡ್‌ನಲ್ಲಿ ಹೆಚ್ಚಿನ ತರಬೇತಿ ಪಡೆದಿದ್ದಾರೆ.

ಶ್ರೀಯುತರು ಜಾಗ್ವಾರ್ ಏರ್ ಫ್ಲೈಟ್ ಇಂಜೀನಿಯರ್ ಆಗಿ 9 ವರ್ಷದ ದೀರ್ಘಕಾಲ ಅನುಭವ ಪಡೆದರು. ಇವರ ಉತ್ತಮ ನಡತೆಯ ಪ್ರತಿಭೆಯನ್ನು ಗುರುತಿಸಿ ಭಾರತೀಯ ವಾಯುದಳವು ಏರ್‌ಫೋರ್ಸಿನ ಅತ್ಯುತ್ತಮ ಪ್ರಶಸ್ತಿ "ಚೀಫ್ ಆಫ್ ದಿ ಏರ್‌ಸ್ಟಾಫ್" ಕಮಂಡೇಶನ್ ಪ್ರಶಸ್ತಿ ಪತ್ರ ನೀಡಿ ಗೌರವಿಸಿತು.

ಪಾಡಿಬೆಟ್ಟೀರ ದಿ|| ಮಂದಣ್ಣನವರ ಪ್ರಥಮ ಪುತ್ರಿ ಚಿತ್ರಾಳನ್ನು 1990 ರಲ್ಲಿ ವಿವಾಹವಾಗಿ ಇಬ್ಬರು ಅವಳಿ ಜವಳಿ ಮಕ್ಕಳನ್ನು ಪಡೆದರು. ಅಭಿರತ್ ಕುಶಾಲಪ್ಪ ಮತ್ತು ಚಿರಾಗ್ ಕಾರ್ಯಪ್ಪ ಇವರ ಮಕ್ಕಳು. ಪ್ರಸ್ತುತ ಬೆಂಗಳೂರಿನ ಕ್ಯಾನ್ವಿ ಅಂಗ್ಲ ಶಾಲೆಯಲ್ಲಿ ಐದನೆ ತರಗತಿಯಲ್ಲಿ ಓದುತ್ತಿದ್ದಾರೆ.

ಇವರ ತಂದೆ ಅಯ್ಯೇಟೀರ ಗಣಪತಿಯವರು ಭಾರತೀಯ ರೈಲ್ವೆಯಲ್ಲಿ ಆಫೀಸ್ ಸುಪರಿಟೆಂಡೆಂಟ್ ಆಗಿ 1990 ರಲ್ಲಿ ನಿವೃತ್ತಿ ಪಡೆದು ಪ್ರಸ್ತುತ ಮೈಸೂರಿನ ವಿಜಯನಗರದ 2 ನೇ ಬಡಾವಣೆಯಲ್ಲಿ ತಮ್ಮ ಪತ್ನಿ ಕಮಲ (ಪರಿಚನ ಅಣಯ್ಯನವರ ಮಗಳು) ಜೊತೆ ತಮ್ಮ ನಿವೃತ್ತಿ ಜೀವನವನ್ನು ಕಳೆಯುತ್ತಿದ್ದಾರೆ. ಮನೋಜ್ ಕುಮಾರ್‌ನವರಿಗೆ ಕಿಶೋರ್‌ಕುಮಾರ್ ಮತ್ತು ವಿರೇಂದ್ರ ಕುಮಾರ್‌ರೆಂಬ ಇಬ್ಬರು ಸಹೋದರರು ಇದ್ದಾರೆ. ಕಿಶೋರ್ ಕುಮಾರ್ ಇಂಜಿನಿಯರ್ ಎಕ್ಸಿಕ್ಯೂಟಿವ್ ಮತ್ತು ವೀರೇಂದ್ರ ಕುಮಾರ್ ಏರ್‌ಕಂಡಿಶನ್ಡ್ ಸರ್ವೀಸ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಕೊಡಗು ಸಂಗಾತಿಯನ್ನು ತಾವೀರುವ ಸ್ಥಳಕ್ಕೆಲ್ಲಾ ತರಿಸಿ ಓದಿ ಮೆಚ್ಚಿಕೊಂಡಿರುವ ಶ್ರೀಯುತರು ಪತ್ರಿಕೆ ಬಗ್ಗೆ ಅಪಾರ ಪ್ರೀತಿ ವಿಶ್ವಾಸವನ್ನು ಹೊಂದಿದ್ದಾರೆ. ಪತ್ರಿಕೆಯೇ ನಮ್ಮ ಜನಾಂಗದ ಬೆನ್ನೆಲುಬು ಎಂದು ನಂಬಿದ್ದಾರೆ. ಜನಾಂಗದ ಯುವ ಪೀಳಿಗೆ ಬಗ್ಗೆ ಅಪಾರ ನಂಬಿಗೆ ಮತ್ತು ಕಾಳಜಿ ಇದೆ. ಇವರ ಪ್ರಕಾರ ಈಗ ಇಂಜೀನಿಯರ್ ಮತ್ತು ಮೆಡಿಕಲ್ ವಿಭಾಗಗಳಲ್ಲದೆ ಇನ್ನುಳಿದ ಬೇರೆ ಬೇರೆ ವಿಭಾಗಗಳಾದ ಕಂಪ್ಯೂಟರ್, ಬಯೋಟೆಕ್ನಾಲಜಿ, ಜರ್ನಲಿಸಂ, ಹೊಟೇಲ್ ಮ್ಯಾನೇಜ್‌ಮೆಂಟ್, ಐ.ಟಿ.ಐ. ಇನ್ನಿತರ ಯಾವುದೇ ಕ್ಷೇತ್ರವನ್ನು ಆಯ್ದುಕೊಂಡು ಅದರಲ್ಲಿ ಪ್ರಾಮಾಣಿಕತೆಯಿಂದ ಹೆಚ್ಚು ಶ್ರಮವಹಿಸಿ ಮುಂದುವರಿದರೆ ಅಂತವರಿಗೆ ಜೀವನದಲ್ಲಿ ಖಂಡಿತ ಭವಿಷ್ಯವಿದೆ ಎನ್ನುತ್ತಾರೆ.

ಇವರು ಇನ್ನು ಹೆಚ್ಚಿನ ಮುಂಬಡ್ತಿ ಪಡೆದು ಉತ್ತಮ ಸೇವೆಯನ್ನು ಭಾರತೀಯ ವಾಯುದಳಕ್ಕೆ ನೀಡಿ ಕೀರ್ತಿ ಗಳಿಸಲಿ ಮತ್ತು ಇವರ ಕುಟುಂಬ ವರ್ಗಕ್ಕೂ ಆ ಪರಮಾತ್ಮನು ಶುಭ ನೀಡಲೆಂದು ಸಂಗಾತಿ ಈ ಸಂದರ್ಭದಲ್ಲಿ ಹಾರೈಸುತ್ತದೆ.

ಲೇಖನ : ಪಟ್ಟಡ ಪ್ರಭಾಕರ್, ಗೌರವ ಸಂಪಾದಕರು, ಕೊಡಗು ಸಂಗಾತಿ.

---

ಟೀಚರ್ : ಮಕ್ಕಳೇ ನಿನ್ನೆ ವ್ಯಾಕರಣ ಪಾಠ ಮಾಡ್ದ್ ಗ್ಯಾನ ಉಟ್ಟು ಅಲ್ವಾ?
ಈಗ ಹೇಳಿ ಲೋಕೇಶ ಯಾಕೆ ಮಿಠಾಯಿ ತಿಂತ್‌ಲ್ಲೆ?
ಅದಲ್ಲಿ ಲೋಕೇಶ.......................
ಕುಟ್ಟಿ : ಅಂವ ಮಹಾ ಮೂರ್ಖ ಟೀಚರ್.

---

ಅಪ್ಪ : ಪುಟ್ಟ, ಶಾಲೆಗೆ ಹೋದ ಮ್ಯಾಲೆ ಟೀಚರ್ ಏನೆ ಕೇಳ್ದರುಸ ಸಿರಿಯಾಗಿ ಉತ್ತರಿಸಕ್ಕು ಗೊತ್ತಾತ?
ಪುಟ್ಟ : ಆತಪ್ಪ, ಹಂಗೆ ಮಾಡಿನೆ.
ಪುಟ್ಟ ಶಾಲೇಲಿ ಪಾಠ ಕೇಳ್‌ಕಾಕನ
ಟೀಚರ್ : ನಿನ್ನ ಹೆಸ್ರ್ ಹೆಂಗಪ್ಪ?
ಪುಟ್ಟ : ಮೈಸೂರು ಪಾಕ್
ಟೀಚರ್ : ನಿನ್ನ ಅಪ್ಪ ಮತ್ತೆ ಅವ್ವಂದ್?
ಪುಟ್ಟ : ಜಿಲೇಬಿ ಮತ್ತೆ ಜಾಂಗೀರ್
ಟೀಚರ್ : ನೀವೆಲ್ಲಾ ಇರ್ದು ಎಲ್ಲಿ?
ಪುಟ್ಟ : ನಾವೆಲ್ಲಾ ಇರ್ದು ಮಿಠಾಯಿ ಡಬ್ಬಿಲಿ.
-ಚಾರನ ಅಶ್ವಿನಿ ಗಣಪತಿ, ಕುಂಬೂರು, ಸೋಮವಾರಪೇಟೆ.

---

# ಪ್ರತಿಷ್ಠಿತ ದಂಬೆಕೋಡಿ ಕಪ್ ಸಮಾರಂಭ - 2003 (ಮೇ 11ರಿಂದ 21ರ ತನಕ)



ಪ್ರತಿಷ್ಠಿತ ದಂಬೆಕೋಡಿ ಕಪ್ - 2003



ಸಮಾರಂಭದಲ್ಲಿ ಸನ್ಮಾನ್ಯ ಕುರುಂಜಿ ಗಂಗಾಧರರವರು ಮಾತನಾಡುತ್ತಿರುವುದು



ವಿಜೇತ ಬಾಳಾಡಿ ತಂಡ ದಂಬೆಕೋಡಿ ಕಪ್‌ನೊಂದಿಗೆ



ಪ್ರೇಕ್ಷಕರ ಗ್ಯಾಲರಿಯಲ್ಲಿ



ದ್ವಿತೀಯ ಟ್ರೋಫಿಯೊಂದಿಗೆ ಪೂರೆಕುಂಜಿಲನ ತಂಡ



ಅಕಾಡೆಮಿ ಅಧ್ಯಕ್ಷರಿಂದ ಪೇರಿಯನ ಕಪ್-2004 ಕ್ಕೆ ವೀಳ್ಯ ಸ್ವೀಕರಿಸುತ್ತಿರುವ ಪೇರಿಯನ ಕುಟುಂಬದ ಜಯಾನಂದ, ಮತ್ತು ಕಾರ್ಯಪ್ಪ ಹಾಗೂ ಕುಟುಂಬಸ್ತರು.

ಚಿತ್ರಗಳು : ಪಾಣತ್ತಲೆ ನಾಗೇಶ್, ಮಡಿಕೇರಿ.

S ಪೆಷಲಿ ಮನುಷ್ಯನೊಬ್ಬನಿಗೆ ಹೆಚ್ಚು ಯೋಚನಾ ಶಕ್ತಿ ಇರುವುದು

## ಕೊಡಗು ಸಂಗಾತಿ ಹಿತೈಷಿಗಳಿಗೆ ವಿಶೇಷ ಸೂಚನೆ

*ಬಂಧುಗಳೇ,*

*ಕೊಡಗು ಸಂಗಾತಿ ಪತ್ರಿಕೆಯ ಶಾಖೆಯು ಮಡಿಕೇರಿಯ ಅಪ್ಪಯ್ಯ ಗೌಡ ರಸ್ತೆಯಲ್ಲಿರುವ "ಪಾಂಡನ ಕಾಂಪೌಂಡ್ಸ್" ನಲ್ಲಿ ಕಾರ್ಯ ನಿರ್ವಹಿಸುವ ವ್ಯವಸ್ಥೆಯನ್ನು ದಿನಾಂಕ 1-6-2003 ರಿಂದ ಕಲ್ಪಿಸಲಾಗಿದೆ. ನಮ್ಮ ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರರವರಿಗೆ ಆರೋಗ್ಯ ನಿಮಿತ್ತ ಅಷ್ಟೇ ಅನಿರೀಕ್ಷಿತವಾಗಿ ತಮ್ಮ ಕಾರ್ಯ ಚಟುವಟಿಕೆಗಳಿಗೆ ಕಡಿವಾಣ ಹಾಕಲು ವೈದ್ಯರುಗಳು ಸಲಹೆ ಇತ್ತ ಪ್ರಕಾರ ಸಧ್ಯ ತೀರ್ಮಾನಿಸಿದಂತೆ "ಸಂಗಾತಿ" ಪತ್ರಿಕೆ ಮುಂದುವರಿಸುವ ಬಗ್ಗೆ ಸೂಕ್ತ ಸಲಹೆ ಸೂಚನೆಗಳನ್ನು ಓದುಗರಿಂದ ಮತ್ತು ಹಿತೈಷಿ ಬಾಂಧವರಿಂದ ಈ ಕೂಡಲೇ ನಿರೀಕ್ಷಿಸುತ್ತದೆ.*

*ಅಂತೆಯೇ ಸಂಗಾತಿಯ ಚಂದಾ ಮತ್ತು ಜಾಹೀರಾತು ಹಣವು ಸಾಕಷ್ಟು ಬಾಕಿಯಿದ್ದು ಈ ಹಣವನ್ನು ಬಾಕಿದಾರರು ಕೂಡಲೇ ಪಾವತಿಸಿ ಮುಕ್ತರಾಗುವಂತೆ ವಿನಂತಿಸುತ್ತೇವೆ. ಈ ನಿಟ್ಟಿನಲ್ಲಿ ಹಾಲಿ ಓದುಗರ ಸಹಕಾರವಿರಲಿ. 7-8 ಸರ್ತಿ ಜ್ಞಾಪನ ಪತ್ರ ಕಳಿಸಿಯಾಗಿದೆ. ಪತ್ರಿಕೆ ನಿರಂತರವಾಗಿ ಹರಿದು ಬರಲು ಸರ್ವರ ಸಹಕಾರ ಅನಿವಾರ್ಯ. ಪತ್ರಿಕೆಯೇ ಜನಾಂಗದ ಬೆನ್ನೆಲುಬು ಎಂಬ ಅರಿವಿರಲಿ.*

*ಹಾಗೂ ಪತ್ರಿಕೆ ನಡೆಯಿಸುವ ಆಸಕ್ತಿಯುಳ್ಳ ಸಾರ್ವಜನಿಕದವರಾಗಲಿ ಜನಾಂಗದವರಾಗಲಿ ಈ ಕೂಡಲೆ ಸಂಪರ್ಕಿಸಿ, ಚರ್ಚಿಸಬಹುದಾಗಿದೆ.*

***Address : # 12058, "Sangathi Nilaya", Vijayanagar IV Stage, II Phase, Hinkal Post, Mysore - 17 Phone : 0821 / 2404290***

-ವ್ಯವಸ್ಥಾಪಕರು

---



ಕೋಳುಮುಡಿಯನ ರಾಮಯ್ಯ

ಜನನ: 1929
ಮರಣ: 27-6-2000

## 3ನೇ ವರ್ಷದ ಪುಣ್ಯಸ್ಮರಣೆ

ನೀವು ನಮ್ಮನ್ನಗಲಿ ಮೂರು ವರ್ಷ ಕಳೆದರೂ ಸದಾ ನಿಮ್ಮ ನೆನಪು ನಮ್ಮಲ್ಲಿ ಮರುಕಳಿಸುತ್ತಿದೆ. ನೀವುಗಳು ಹಾಕಿಕೊಟ್ಟ ದಾರಿಯಲ್ಲಿಯೇ ಮಕ್ಕಳು, ಮೊಮ್ಮಕ್ಕಳು ಮರಿಮಕ್ಕಳು ಮುಂದುವರಿಯುತ್ತಿದ್ದೇವೆ. ನಿಮ್ಮ ಆತ್ಮಕ್ಕೆ ಆ ಪರಮಾತ್ಮನು ಚಿರಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

ಅಲ್ಲದೆ

ದಿನಾಂಕ 13-5-2003 ರಂದು ನಮ್ಮ ತಾಯಿ ಕೋಳುಮುಡಿಯನ ಪಾರ್ವತಿ (ಕಾಮವ್ವ) ನವರು ನಿಧನರಾದ ಸಂದರ್ಭ ಅಂತ್ಯಕ್ರಿಯೆ ಮತ್ತು ಅಪರ ಕ್ರಿಯೆಗಳಲ್ಲಿ ಬಂದು ಸಹಕರಿಸಿದ ಸರ್ವಬಂಧು ಬಾಂಧವರಿಗೂ ಮತ್ತು ನಮ್ಮ ದುಃಖದಲ್ಲಿ ಭಾಗಿಯಾಗಿ ಸಂತೈಸಿದ ಎಲ್ಲರಿಗೂ ನಮ್ಮ ಕೃತಜ್ಞತೆಗಳು.



ಪಾರ್ವತಿ (ಕಾಮವ್ವ)
ಜನನ: 20-9-1937
ಮರಣ: 13-5-2003

*ಪ್ರಕಟಣೆ : ಕೋಳುಮುಡಿಯನ ಅನಂತಕುಮಾರ್, ಗಾಳಿಬೀಡು.*
*ಫೋನ್ : 265632*

---



ಕಾಳೇರಮ್ಮನ ಗಣಪತಿ
ಜನನ: 8-9-1938
ಮರಣ: 15-6-1997

## 6ನೇ ವರ್ಷದ ಸವಿನೆನಪು

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು,
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಗೆ
ಎಲ್ಲರೊಳಗೊಂದಾಗು ಎಂಬಂತೆ ಬಾಳಿ
ಬದುಕು ಜಟಕಾ ಬಂಡಿ ವಿಧಿ ಐದರ ಸಾಹೇಬ
ಕುದುರೆ ನೀನ್ ಅವನು ಪೇಳ್ದಂಗೆ ಪ್ರಯಣಿಸು
ಮದುವೆಗೊ ಮಸಣಕೊ ಹೋಗೆಂದ ಕಡೆ
ಹೋಗು ಎಂಬಂತೆ, ವಿಧಿಯಾಟದಲಿ ಸಾವಿಗೆ ಶರಣಾದಿರಿ.

ನಿಮ್ಮ ಆತ್ಮಕ್ಕೆ ಚಿರಶಾಂತಿ ಮತ್ತು ಮುಕ್ತಿ ಕರುಣಿಸಲೆಂದು ಪ್ರಾರ್ಥಿಸುವ,

ಪತ್ನಿ :ಶ್ರೀಮತಿ ಕೆ. ಎಸ್. ಬಾಗೀರಥಿ, ಮಕ್ಕಳು ಮೀರಾ ಮತ್ತು ನಮಿತ, ಮಂಡ್ಯ. Ph.: 08232 / 223700

---

## ನಿಧನ

ಚೆಟ್ಟಳ್ಳಿ ಗ್ರಾಮದ ನಿವಾಸಿ ಪಿ.ಜಿ. ಅಂಬೆಕಲ್‌ನವರ ಧರ್ಮಪತ್ನಿ ಕನಕಾಂಗಿಯವರು ದಿನಾಂಕ 2-6-2003 ರಂದು ಕೈಲಾಸವಾಸಿಯಾದರು. ಇವರು ಗುಹ್ಯ ಗ್ರಾಮದಲ್ಲಿ ಪ್ರಾಥಮಿಕ ಶಾಲಾ ಅಧ್ಯಾಪಕಿಯಾಗಿದ್ದರು. ಚೆಟ್ಟಳ್ಳಿ ಪ್ರೌಢಶಾಲಾ ನಿವೃತ್ತ ಪ್ರಾಚಾರ್ಯ ಪಿ.ಜಿ. ಅಂಬೆಕಲ್‌ನವರ ಧರ್ಮಪತ್ನಿಯಾಗಿದ್ದು ಇವರಿಗೆ 53 ವರ್ಷ ಪ್ರಾಯವಾಗಿತ್ತು. ಅಲ್ಲದೆ ಉತ್ತಮ ಕಥೆಗಾರ್ತಿಯಾಗಿದ್ದರು. ಮೃತರು ಪತಿ ಮತ್ತು ಮೂವರು ಪುತ್ರಿಯರನ್ನು ಅಗಲಿದ್ದಾರೆ.

-ಸಂಗಾತಿ

Reg. No. KA/SK/MYS-88/2003 Registered : 10-01-96 TCI Kar. 09592

# ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ)

☎: 3433014
1ನೇ 'ಬಿ' ಮುಖ್ಯ ರಸ್ತೆ, ಗಂಗಾನಗರ, ಬೆಂಗಳೂರು - 32

ಪ್ರಪ್ರಥಮ ಬಾರಿಗೆ ಬೆಂಗಳೂರಿನಲ್ಲಿ

## ಆದರ್ಶ ದಂಪತಿ ಮತ್ತು ವಧೂ-ವರಾನ್ವೇಷಣೆ ಕಾರ್ಯಕ್ರಮ

ಸಾವಿರಾರು ರೂಪಾಯಿಗಳ ಬಹುಮಾನ ಗೆಲ್ಲಿರಿ !

ಕನಿಷ್ಠ **150** ದಂಪತಿಗೆ ಬಹುಮಾನ ಗೆಲ್ಲುವ ಸುವರ್ಣಾವಕಾಶ

ಸ್ಥಳ : ಎಸ್. ಕೆ. ಜಿ. ಕಲ್ಯಾಣ ಮಂದಿರ, ಇಂಡಿಯನ್ ಆಯಿಲ್ ಕಾರ್ಪೋರೇಷನ್ ಎದುರು

(ಕೆ. ಆರ್.ಪುರ ಸೇತುವೆ ಹತ್ತಿರ) ಬೆಂಗಳೂರು-16

ದಿನಾಂಕ : **29-06-2003** ಇಂದೇ ಸ್ಥಳವನ್ನು ಕಾದಿರಿಸಿ !

ಸರ್ವರಿಗೂ ಸ್ವಾಗತ

| ಅಧ್ಯಕ್ಷರು | ಉಪಾಧ್ಯಕ್ಷರು | ಕಾರ್ಯದರ್ಶಿ | ಖಜಾಂಚಿ |
|---|---|---|---|
| ದಂಬೆಕೋಡಿ ಆನಂದ | ಎಸ್. ತಿಮ್ಮಪ್ಪ ಗೌಡ | ನಂಗಾರು ನಿಂಗರಾಜು | ಕೇವಳ ರವೀಂದ್ರನಾಥ |

## ದಾಂಪತ್ಯ ಜೀವನದ ಸುವರ್ಣ ಮಹೋತ್ಸವದ ಶುಭಾಶಯಗಳು



ನಿವೃತ್ತ ಉಪದೇಶಕ ಶಿರಕಜೆ ನಂಜುಂಡ
ಮತ್ತು ಆರ್ಯವರ್ತದ ಗೃಹಿಣಿ ಪೊನ್ನಮ್ಮ
22-5-1953 - 22-5-2003
ಗುಡ್ಡೆ ಹೊಸೂರು. Ph. : 679056

ನೀವು ನಿಮ್ಮ ಐವತ್ತು ವರ್ಷಗಳ ಸಾರ್ಥಕ ದಾಂಪತ್ಯ ಜೀವನ ನಡೆಸಿ, ಸುವರ್ಣ ವಿವಾಹ ಮಹೋತ್ಸವವನ್ನು ಆಚರಿಸುತ್ತಿರುವ ಸಂದರ್ಭ ಆಯುರಾರೋಗ್ಯ, ಸೌಭಾಗ್ಯ ಸೌಖ್ಯಗಳನ್ನು ಅಮಿತವಾಗಿ ಕರುಣಿಸಲೆಂದು ಸರ್ವಶಕ್ತನಾದ ವೆಂಕಟೇಶ್ವರನಲ್ಲಿ ಪ್ರಾರ್ಥಿಸುವ......

ಮಕ್ಕಳು ಮತ್ತು ಸೊಸೆಯಂದಿರು, ನರೇಂದ್ರ -ಯಶೋಧ, ಶ್ರೀಧರ-ಮೋಹಿನಿ, ಅಳಿಯಂದಿರು, ಹೆಣ್ಣು ಮಕ್ಕಳಾದ ಲಕ್ಷ್ಮಣ್ - ವಸುಂಧರ, ಸತ್ಯನಾರಾಯಣ- ಸುನೀತಿ, ರಾಮಮೂರ್ತಿ- ಶಾಕುಂತಲ, ಮೊಮ್ಮಕ್ಕಳಾದ ಬಿಪಿನ್, ಕೃತಿಕ, ಉತ್ಪಲ್, ವಿಷ್ಣು, ಅಭಿನಂದನ್, ಪುಟಾಣಿ ಚಿಟ್ಟಿ, ಹಾಗೂ ಆತ್ಮೀಯ ಬಂಧು ಮಿತ್ರರು.

## ಪ್ರಥಮ ಹುಟ್ಟು ಹಬ್ಬದ ಶುಭಾಶಯಗಳು



ಕೆ.ಜಿ. ಪ್ರಜ್ವಲ್
ಜನನ : 18-6-2002

ಪ್ರಜ್ವಲ್, ನಿನ್ನ ಪ್ರಜ್ವಲ ಭವಿಷ್ಯಕ್ಕೆ ನಾವೆಲ್ಲಾ ಹಾರೈಸುತ್ತೇವೆ.

ಇಂದ : ತಂದೆ, ತಾಯಿ, ಕೆದಂಬಾಡಿ ಗೋಪಾಲಪ್ಪ ಮತ್ತು ಜ್ಯೋತಿ, ಅಜ್ಜ, ಅಜ್ಜಿ- ಕುಲ್ಲೆ ಚಿಟ್ಟೀರ ನಂಜಪ್ಪ, ರುಕ್ಮಿಣಿ, ಮತ್ತು ಅಪಾರ ಬಂಧುಗಳು ಹಾಗೂ ಮಿತ್ರರು.

ವಿಳಾಸ : ಕೆ. ಬಿ. ನಂಜಪ್ಪ, ನಂ. 29, ಗೋಪಾಲಪ್ಪ ಲೇಔಟ್, ಮನೋರಾಯನ ಪಾಳ್ಯ, ಆರ್.ಟಿ. ನಗರ, ಬೆಂಗಳೂರು - 32 Ph. : 3437533

Kodagu Sangathi Kannada Fortnightly Edited, Published, Printed by Pattada Sheelamani, # 12058 "Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.
And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.